ಕನೀಯ ಕವಿಕೃತ

# ಸತ್ವಾಲೋಕನಂ

ಎಂಬ ವಸ್ತುಕ ಕಾವ್ಯಂ

ಹಳಗನ್ನಡದ ಶೈಲಿಯ ಹೊಸ ಕೃತಿ



ಟಿ. ಕೇಶವ ಭಟ್, ಎಂ. ಎ.
ಮಡಿಕೇರಿ – ಕೊಡಗು.

ಕನೀಯ ಕವಿಕೃತ

# ಸತ್ವಾಲೋಕನಂ

## ಎಂಬ ವಸ್ತುಕ ಕಾವ್ಯಂ

**ಹಳಗನ್ನಡದ ಶೈಲಿಯ ಹೊಸ ಕೃತಿ**

ಶ್ರೀ. ಎ. ಎಸ್. ನಾವಡ - ಅವರಿಗೆ
'ಸ್ನೇಹಪೂರ್ವಕ'
ಟಿ. ಕೇಶವ ಭಟ್ಟ
೨೫-೨-೬೦.



**ಟಿ. ಕೇಶವ ಭಟ್, ಎಂ. ಎ.**

ಮಡಕೇರಿ – ಕೊಡಗು.

ಮೊದಲನೆಯ ಮುದ್ರಣ — 1959



ಕೊಡಗು ಕರ್ಣಾಟ ಸಂಘದ ರಜತಮಹೋತ್ಸವದ
ಸಂದರ್ಭದಲ್ಲಿ ಉದ್ಘಾಟಿಸಲ್ಪಟ್ಟಿತು.
ಶಕ ೧೮೮೦, ಫಾಲ್ಗುಣ ೨ (21-2-1959)



**ಬೆಲೆ**

ಸಾಧಾರಣ ಪ್ರತಿ ರೂ. ***2-50.***] [ಉತ್ತಮ ಪ್ರತಿ ರೂ ***3-25.***

ಮುದ್ರಕರು
**ರತ್ನತ್ರಯ ಪ್ರಿಂಟರ್ಸ್,**
ಓಲ್ಡ್ ಪೋಸ್ಟ್ ಆಫೀಸ್ ರೋಡ್, ಮೈಸೂರು.

# ವಿಜ್ಞಾಪನೆ

ಸತ್ಯಾಲೋಕನ ಕಾವ್ಯದ ರಚನೆ ಹಲವು ವರ್ಷಗಳ ಮೊದಲೇ ಆಗಿದ್ದರೂ, ಇಂತಹ ಈ ಕಾವ್ಯದ ಪ್ರಕಾಶನಕ್ಕೆ ಪ್ರಕಾಶಕರಾರೂ ಮನಸ್ಸು ಕೊಡದುದರಿಂದ ಅಚ್ಚಾಗದೆ, ಇದರ ಹೂನಲು ಕಾಲದ ಮಳಲಿನಲ್ಲೇ ಇಂಗುತ್ತಿತ್ತು. ನನ್ನ ಮಿತ್ರರೂ, ಶ್ರೇಷ್ಠ ಗಮಕಿಗಳೂ ಆದ ಶ್ರೀ ಅಶ್ವತ್ಥನಾರಾಯಣ — ಅವರು ಇದನ್ನು ನೋಡಿ ಮೆಚ್ಚಿ ಹಲವೆಡೆ ವಿದ್ವಾಂಸರ ಮುಂದೆ ವಾಚನ ಮಾಡಿದಾಗ ಕೇಳಿದವರೂ ಮೆಚ್ಚಿ 'ಸಾಹಿತ್ಯ ಕ್ಷೇತ್ರದಲ್ಲಿ ಇದು ಬೆಳಕು ಕೊಡುತ್ತಿದೆ' ಎಂದೇ ದೃಢವಾದ ಅಭಿಪ್ರಾಯವನ್ನಿತ್ತರು ; ಅಚ್ಚುಹಾಕಿಸಲು ಒತ್ತಾಯಿಸಿದರು. ಆದುದರಿಂದ ಅಚ್ಚುಹಾಕಿಸುವ ಸಾಹಸವನ್ನೂ ಕೈಗೊಂಡೆ. ಅಂತೂ ಕಾವ್ಯರಸದ ಹೂನಲು ಮಳಲ ನೆಲವನ್ನು ದಾಟ, ಹೊರಗೆ ಬಂದುದಕ್ಕ ಕೃತಕೃತ್ಯನಾಗಿದ್ದೇನೆ. ವಿಶಾಲ ಮತಿಗಳಾದ ಸಾಹಿತ್ಯಪ್ರೇಮಿಗಳು ಇದನ್ನು ಸ್ವಾಗತಿಸಿ ಪ್ರೋತ್ಸಾಹಿಸುವರೆಂದೇ ನನ್ನ ನಂಬಿಕೆ.

ಶ್ರೀ ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಡೆದ ಕೊಡಗು ಕರ್ಣಾಟ ಸಂಘದ ರಜತೋತ್ಸವದಂದು ಇದನ್ನು ಉದ್ಘಾಟನೆ ಮಾಡಲು ಆಸ್ಪದವಿತ್ತ ಸಂಘದವರಿಗೆ ನಾನು ಋಣಿ. ಆ ದಿನ ಉದ್ಘಾಟಕರಾಗಿ ಈ ಕಾವ್ಯದ ಸತ್ವವನ್ನು ಸಭೆಗೆ ವಿವರಗೊಳಿಸಿದ ಪ್ರೊ. ಕೆ. ಆರ್. ಉಡುಪ, ಎಂ.ಎ., ಬಿ.ಟಿ. – ಅವರಿಗೆ ನನ್ನ ಕೃತಜ್ಞತೆಗಳು.

ಇಷ್ಟರೊಳಗೆ ಇದನ್ನು ಓದಿದವರಲ್ಲಿ ಶ್ರೀ ದ. ರಾ. ಬೇಂದ್ರೆ, ಎಂ.ಎ.-ಅವರು, ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಪಿಎಚ್.ಡಿ-ಅವರು, ಶ್ರೀ ನಂ ಅಶ್ವತ್ಥನಾರಾಯಣ, ಗಮಕವಿದ್ವಾಂ-ಅವರು ಅಭಿಪ್ರಾಯವನ್ನು ಕಳುಹಿಸಿ, ಗ್ರಂಥಶೋಭೆಯನ್ನು ಮಾಡಿದ್ದಾರೆ. ಅವರಿಗೆ ನಾನು ಕೃತಜ್ಞನು. ಅಲ್ಲದೆ ನನ್ನ ಪ್ರಾರ್ಥನೆಯಂತೆ ತಮ್ಮ ವಿಚಾರಪೂರಿತವಾದ ಅಭಿಪ್ರಾಯಗಳನ್ನು ಮುಂದೆಯೂ ಕೊಡತಕ್ಕ ಸಾಹಿತಿಗಳಿಗೆಲ್ಲ ನನ್ನ ಕೃತಜ್ಞತೆಗಳು ಮುಡಿಪಾಗಿವೆ.

ಇದನ್ನು ತಮ್ಮಿಂದಾದಷ್ಟು ಚೆನ್ನಾಗಿ ಮುದ್ರಿಸಿದ ಮೈಸೂರಿನ ರತ್ನತ್ರಯ ಪ್ರೆಸ್ಸಿನ ಮಾಲೀಕರಿಗೂ ಹಾರ್ದಿಕ ವಂದನೆಗಳು.

ಹಳೆಯದೆಂದು ಹಳಿವವರಿಗೆ ಹೊಸತಾಗಿ, ಹೊಸತೆಂದು ಹೀನಯಿಸುವವರಿಗೆ ಹಳೆಯದಾಗಿ ತೋರಬಹುದಾದ ಈ ಸತ್ವಾಲೋಕನವನ್ನು ಎಲ್ಲರೂ ಅವಲೋಕಿಸಬೇಕೆಂದೂ, ಅವಲೋಕಿಸಿದವರು ಸಾಧ್ಯವಿದ್ದಲ್ಲಿ ಆ ಕುರಿತು ತಮಗಾದ ಅಭಿಪ್ರಾಯವನ್ನು ಕಳುಹಿಸಿಕೊಡಬೇಕೆಂದೂ ಪ್ರಾರ್ಥಿಸುತ್ತೇನೆ.

**ಟಿ. ಕೇಶವ ಭಟ್**, ಎಂ. ಎ.

ಪ್ರಕಾಶಕ.

ಶ್ರೀರಾಮನವಮಿ, ಚೈತ್ರ ೧೮೮೧.

(17-4-1959)



(ಕನೀಯಂ) ಟಿ. ಕೇಶವ ಭಟ್, ಎಂ. ಎ.

ವಿದ್ವಾನ್, ವಿಶಾರದ.

ಬೆಳಕಿತ್ತರ್ ಕವಿಪಂಪ-ರನ್ನ-ವರರುದ್ರಾಂಡಯ್ಯ ಮುಂತಾದವರ್
ವಿಳಸತ್ಕಾವ್ಯ-ಸುರತ್ನ-ದೀಪ-ತತಿಯಿಂ ಸಾಹಿತ್ಯ-ಸುಕ್ಷೇತ್ರದೊಳ್
ಬಳಿಕಾನುಂ ಪೊಸಗಬ್ಬಮಂ ಪಣತೆಯೊಂದಂ ಪೊತ್ತಿಸಲ್ಕಾರ್ತೆನೇಂ
ತಿಳಿಯೆಂ ಮಾಳ್ಪುದೊ ಮಾಡದೋ ಬೆಳಕನಾಂ ಕರ್ತವ್ಯಮಂ ಮಾಡಿದೆಂ||

[ಆ. ೮ - ಪ. ೩೧.]

## ಗ್ರಂಥಾವಲೋಕನ ನಿದರ್ಶನವಾಗಿ ಶ್ರೀ ದ. ರಾ. ಬೇಂದ್ರೆ ಯವರು ಕಳುಹಿದ ಪದ್ಯಗಳು.

ಸತ್ತ್ವಾವಲೋಕನ ಪಥದೊಳ್
ತತ್ತ್ವಾವಲೋಕನಮೆ ಸಹಜವಾಗಿರೆ ಸ್ವಾಂತಃ ||
ಸ್ವತ್ವಸ್ಪಂದನವಾದ ಕ
ವಿತ್ವದ ಸಂರಾಜ್ಯದಲ್ಲದಾರು ಕನೀಯರ್ ||

ಸುರಗಂಧರ್ವನ ಗರ್ವಪರ್ವತದ ಪಕ್ಷಚ್ಛೇದವಂ ಮಾಡಲುಂ
ಹರನುಂ ಸಂಹರಣಾರ್ಥವಾಗಿ ಭಪದೊಳ್ ಮೇಣಟ್ಟದಂ ಕೃಷ್ಣನಂ
ವರಮೈತ್ರಂ ಪ್ರತಿಪಾತ್ರವಾಗೆ ಚರಿತಂ ತಾನದ್ಭುತಾಶಾಂಕುರಂ
ನರನಾರಾಯಣನಾಟಕಂ ನಡೆದಿರಲ್ಕಾ ಸಂಗರಂ ಭಂಗುರಂ ||

ಕಾವ್ಯಂ ಜೈನಕವೀಶ್ವರರ್ ತುಳಿದ ಮಾರ್ಗಂ ಸಮ್ಮತಂ ವಸ್ತುವುಂ
ಸೇವ್ಯಂ ವೈಷ್ಣವ ಶ್ರೋತ್ರಿಯಾಗ್ರಣಿಗಳಿಂ ತಾಂ ಬಂಧುರಂ ಬಂಧದೊಳ್
ಶೈವಾನುಗ್ರಹವೊಂದಿ ಬಂದಿದೆ ಕಣಾ ಇನ್ನೇನಭಿಪ್ರಾಯವೋ
ದೈವಾನುಗ್ರಹವುಂಟೆ ಬೇರೆ ಕವಿಗುಂ ಸಾರಸ್ವತಂ ಸಂಗತಂ ||

ಕೇಶವ ಕವಿಕೃತ ಕಾವ್ಯಂ
ಪ್ರಾಶನಯೋಗ್ಯಂ ಸದಂತರಂಗಂ ತೀರ್ಥಂ
ಆ ಶಿವನುಂ ಕೇಶವನುಂ
ಪೋಷಿತರೇಕಾಂಗವಾಗಿ ನಿಂದರ್ ಕೃತಿಯೊಳ್ ||

— ಅಂಬಿಕಾತನಯದತ್ತ

ರುಚಿಚಕ್ರದ ಪರಿವರ್ತಂ
ಪ್ರಚಲಿತ ಪಾಶ್ಚಾತ್ಯಮಾರ್ಗದಂಧಪ್ರೇಮಂ ||
ಸುಚರಿತ ಕವಿಪದ್ಧತಿಯಂ
ವಿಚಲಿತಗೊಳಿಸಲ್ಕೆ ಸಾಲ್ವುದೆಂತೀ ಧರೆಯೊಳ್ || ೧ ||

ಗಿರಿಗೆಂತುನ್ನತಿ ಬೆಂಕಿಗೆಂತು ದಹನಂ ಗಾಂಭೀರ್ಯಮೆಂತಬ್ಧಿಗಂ
ತಿರೆಗೆಂತುತ್ತಮಗಂಧಮಾ ದಿನಕರಂಗೆಂತಾ ಮಹಾತೇಜಮುಂ ||
ವಿತಮಾನವ್ಯಕುಲಕ್ಕಮಂತೆ ಸಹಜಂ ರತ್ಯಾದಿ ಭಾವಂ ವಲಂ
ಚಿರಸಾಹಿತ್ಯಕಿದಲ್ತೆ ಮೂಲವಿಷಯಂ ವ್ಯಾವರ್ಣನಕ್ಕೂರ್ಜಿತಂ || ೨ ||

ಪಿರಿದೆನೆ ನಡೆ ಪಿರಿದದು ನುಡಿ
ಪಿರಿದೈಸಲೆ ಭಾವದೆತ್ತರಂ ಪಿರಿದೆಲ್ಲಂ |
ಪುರುಷರ್ ಪಿರಿಯರೆನಲ್ ಕವಿ
ವರರುಂ ಪಿರಿದಪ್ಪ ಕೃತಿಗಳಂ ವಿರಚಿಸಿದರ್ || ೩ ||

ಎಲ್ಲರ್ ಬಲ್ಲ ಕತೆಯೆನ
ಲೆಲ್ಲಿಯುಮಿನಿಸಿಸಿಲ್ಲದೊಂದು ಸೊಬಗಂ ಬೆಡಗಂ
ಬಲ್ಲಿದರೊಂದಿಸೆ ಕವಿಗಳ್
ಸಲ್ಲಲಿತಕಲಾವಿಲಾಸದಿಂ ಪೂರ್ವದವರ್ || ೪ ||

ಪೊಸಯುಗದೊಳ್ ಪೊಸಕೃತಿಯುಂ
ರಸಮೊಸರ್ವಂತುಸಿರಲಾರ್ಪರಿರ್ಪರೆನುತ್ತುಂ |
ಸುಸಮಾಹಿತಮನದಿಂದಂ
ಬಿಸವಂದಮೆನಲ್ಕೆ ಸಮೆದ ಕವಿ ಸೀಂ ಧನ್ಯಂ || ೫ ||

ದೋರ್ವಲದೆಸಕಂ ರಂಜಿಸು
ವೀರ್ವರ ವರಕಥೆಯೆ ವಸ್ತು ವಸ್ತುಕಕೆನಿಸಲ್ |
ಪೂರ್ವದ ಚಂಪೂರೂಪಮು-
ಪೂರ್ವತೆಯುಂ ತಳೆದು ಪೊಳೆವುದಯ್ ಪೊಸಜಾಣಿಂ || ೬

ಕವಿಯಿಂ ಸತ್ತ್ವವಲೋಕಂ ಸಹೃದಯಜನತಾ |
ಸತ್ತ್ವದಾಲೋಕಕಲ್ಪಂ |
ಸುವಿಚಾರಂ ಕಾವ್ಯಲೋಕೋಚಿತ ಮೃದುಮಧುರಾಲಾಪಕೀರ್ಣಂ
ಸುಪೂರ್ಣಂ |
ಕವಿತಾವಿನ್ಯಾಸಮೊಳ್ಪಂ ತಳೆದಿರೆ ವಚನಂ ಕಾಂತಿಯುಂ ಸೂಸಲೆತ್ತಂ
ಬುವಿಯೊಳ್ ಕಾವ್ಯಪ್ರಚಾರಂ ಕವಿಗಮುರುಯಶಂ ಬರ್ಕೆ ತಾಂ
ನಿಚ್ಚನೆಂಬೆಂ || ೭ ||

ಚಾರುತರಾಲಂಕಾರಂ
ಸಾರಂ ಶೃಂಗಾರವೀರಪೂರಂ ಪರಿಯಲ್ |
ಹಾರಾವಳಿಯಿಂದೊಪ್ಪುವ
ನಾರೀಮಣಿಯಂತೆ ಕಾವ್ಯಮೆಳೆಯದೆ ಜನರಂ || ೮ ||

ಕೃತಕೃತ್ಯಂ ಕವಿಕೇಶವ
ನತಿನಯದೆ ಕನೀಯನೆಂದೊಡಂ ಮಹನೀಯಂ |
ಮತಿವಂತರ್ ಪಳಗನ್ನಡ
ಗತಿಲೋಲರ್ ಮೆಚ್ಚಿ ಪಡೆಗೆ ಕೃತಕೃತ್ಯತೆಯಂ || ೯ ||

ಪ್ರಸ್ತುತ ಕಾವ್ಯಾಲೋಕನ
ವಿಸ್ತಾರಿತಹರ್ಷನಾತ್ತಪುಲಕೋತ್ಕರ್ಷಂ |
ಅಸ್ತಸಮಸ್ತಾಸೂಯಂ
ಹಸ್ತದಿನರ್ಪಿಸುವನೀ ಪ್ರಶಸ್ತಿಯ ಸುಮಮಂ || ೧೦ ||

— ಡಾ|| ಕೆ. ಕೃಷ್ಣಮೂರ್ತಿ
ಎಂ. ಎ., ಬಿ. ಟಿ., ಪಿಹೆಚ್. ಡಿ.

ಹಾಸನ

ತಾ॥ 21—3—1959

ಕಳೆದ ವರ್ಷದ ಬೇಸಿಗೆ ರಜಾದಲ್ಲಿ ನನ್ನ ಮಿತ್ರರಾದ ಶ್ರೀ ಕೇಶವ ಭಟ್, ಎಂ. ಎ. ಅವರು ರಚಿಸಿರುವ 'ಸತ್ತ್ವಾವಲೋಕನಂ' ಎಂಬ ವಸ್ತುಕ ಕಾವ್ಯವು ಇನ್ನೂ [illegible] ಪ್ರತಿಯಲ್ಲಿದ್ದಾಗಲೇ ವಿದ್ವಾಂಸರ ಸನ್ನಿಧಿಯಲ್ಲಿ ನಾಲ್ಕಾರು ಬಾರಿ ವಾಚನ ಮಾಡುವ ಸುಯೋಗವು ನನಗೆ ಲಭಿಸಿತು. ಈಗ ಆ ಕಾ[illegible]ವು ಅಚ್ಚುಕೂಟದಿಂದ ಸರ್ವಾಂಗಸುಂದರವಾಗಿ ಹೊರಬಂ[illegible]ಡಗು ಕರ್ನಾಟಕ ಸಂಘದ ರಜತ ಮಹೋತ್ಸವದ ಸಂದರ್ಭದಲ್ಲಿ ಶ್ರೀ ಅ. ನ. ಕೃಷ್ಣರಾಯರವರ ನೇತೃತ್ವದಲ್ಲಿ ಉದ್ಘಾಟಿಸಲ್ಪಟ್ಟಿರುವುದು ಅತ್ಯಂತ ಸಂತಸದ ಸಂಗತಿ

ಈಗಿನ ಕಾಲದಲ್ಲಿ ಚಂಪೂಕಾವ್ಯವನ್ನು ಬರೆವವರು ವಿರಳ; ಇಲ್ಲವೆಂದರೂ ತಪ್ಪಾಗಲಾರದು. ಶ್ರೀ ಟಿ. ಕೇಶವ ಭಟ್ಟರು ಇಂಥ ಮಹೋದ್ಯಮವನ್ನು ಕೈಗೊಂಡು ಯಶಸ್ವಿಗಳಾಗಿರುತ್ತಾರೆ. ಕನ್ನಡ ಸಾಹಿತ್ಯ ಭಂಡಾರಕ್ಕೆ ಇದೊಂದು ಬೆಲೆಯುಳ್ಳ ಕಾಣ್ಕೆಯಾಗಿದೆ. ಗಮಕ ವಾಚನಕ್ಕೆ ಈ ಕಾವ್ಯವು ಬಹಳ ಚೆನ್ನಾಗಿ ಅಳವಡುತ್ತದೆ. ತರುಣ ಗಮಕಿಗಳು ಈ ಕಾವ್ಯವನ್ನು ಬೆಳಕಿಗೆ ತರುವ ಸಾಹಸ ಮಾಡಬೇಕೆಂತ ಪ್ರಾರ್ಥಿಸುತ್ತೇನೆ. ಕಂದ ವೃತ್ತಗಳನ್ನು ನಿರಾಯಾಸವಾಗಿ ಬರೆಯುವುದರಲ್ಲಿ ಭಟ್ಟರು ಸಿದ್ಧಹಸ್ತರು. ಒಳ್ಳೆಯ ಗಮಕಿಯು ಮನಸ್ಸು ಮಾಡಿದರೆ ಅವುಗಳನ್ನು ಕುಣಿಸಬಹುದು. ಇಂಥ ಸುಂದರ ವಸ್ತುಕ ಕಾವ್ಯವು ಅತ್ಯಂತ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ. ಶ್ರೀ ಕೇಶವ ಭಟ್ಟರಂಥ ವಿದ್ವಾಂಸರಿಂದ ನಾಡು ಇಂಥ ಇನ್ನೂ ಅನೇಕ ಕೃತಿಗಳನ್ನು ಬಯಸುತ್ತದೆ. ಶ್ರೀ ವೀರನಾರಾಯಣನು ಅವರಿಗೆ ಸಕಲ ಸನ್ಮಂಗಳಗಳನ್ನೂ ಕೊಟ್ಟು ಕಾಪಾಡಲೆಂತ ಪ್ರಾರ್ಥಿಸುತ್ತೇನೆ.

**ನಂ. ಅಶ್ವತ್ಥನಾರಾಯಣ**

ಕನ್ನಡ ಪಂಡಿತರು, ಗಮಕ ವಿದ್ವಾನ್.

# ಕೃತಿ ಪರಿಚಯ

## ಕವಿ-ಕಾವ್ಯ ನಾಮ ವಿಚಾರ

ಈ ಕಾವ್ಯವು "ಸತ್ವಾವಲೋಕನ ವಸ್ತುಕ ಕಾವ್ಯ" ವೆಂತಲೂ, ಇದು ಚಂಪುವೆಂತಲೂ ಇದಕ್ಕೆ ಹರಿ-ನರ-ಸಮರವೇ ಕಥಾವಸ್ತುವೆಂತಲೂ ಇದನ್ನು ರಚಿಸಿದವನು ಸಜ್ಜನ ಪದಮಸ್ತಕನೂ ಉಪಾಧ್ಯಾಯನೂ ಕನೀಯನೂ ಆದ ಕೇಶವನೆಂತಲೂ ಈ ಕಾವ್ಯದಲ್ಲಿ ಉಕ್ತವಾಗಿದೆ. ಒಂದರ್ಥದಲ್ಲಿ ಸತ್ + ಜನ-ಪದ-ಮಸ್ತಕಂ-ಕನೀಯಂ-ಎಂದರೆ, ಸತ್ಪುರುಷರ ಪಾದಕ್ಕೆ ವಿನಮ್ರನಾಗಿರುವ-ಅಲ್ಪನಾಗಿರುವ (ಕಿರಿಯವನಾಗಿರುವ) ತಾನೆಂದೂ ಇನ್ನೊಂದರ್ಥದಲ್ಲಿ ಸತ್ ಜನ ಪದ (ದೇಶ; ಹಳ್ಳಿಗಳ ಸಮೂಹ; ಜನತೆ)-ಮಸ್ತಕಂ-ಕನೀಯಂ,- ಎಂದರೆ, ಉತ್ತಮ ಜನತೆಗೆ ಶಿರಃ ಪ್ರಾಯನಾಗಿ ಕವಿಗಳ ಗಣನೆಯಲ್ಲಿ ಮೊದಲಿಗನೆನಿಸುವಾತನೆಂದು ಹೇಳಿಕೊಂಡಂತಿದೆ. ಉದಯಾದಿತ್ಯಾಲಂಕಾರದಲ್ಲಿ-

> ಗದ್ಯದ ಪದ್ಯದ ಮಿಶ್ರದೆ
> ಹೃದ್ಯಂ ಚಂಪೂ ಸಮಾಖ್ಯ ಕಾವ್ಯಂ ಸೇವ್ಯಂ ||

ಎಂದು ಹೇಳಿದಂತೆ ಈ ಕಾವ್ಯವು ಚಂಪುವೆನಿಸುವುದು. ಚಂಪು ಮತ್ತು ವಸ್ತುಕ, ಎಂದರೆ, ಒಂದೇ-ಎಂದು ಅಪ್ರತಿಮ ವೀರಚರಿತೆಯಲ್ಲಿ ಹೇಳಿದೆ. ಎಂಟು ಆಶ್ವಾಸಗಳಿಂದ ಕೂಡಿದ ಇದೊಂದು ಚಿಕ್ಕ ಚಂಪು ಕಾವ್ಯವೆಂಬುದು ನಿಶ್ಚಯ. ಇದಕ್ಕೆ "ಸತ್ವಾವಲೋಕನಂ" ಎಂಬ ಹೆಸರೇಕೆ? ಇದೇ ಕಾವ್ಯದ ಪ್ರಮಾಣವನ್ನೇ ನೋಡೋಣ-

ಪ್ರತಿಯೊಂದು ಆಶ್ವಾಸದ ಅಂತ್ಯದಲ್ಲಿ 'ಸತ್ವಾವಲೋಕನ ಕಾವ್ಯದೊಳ್' ಎಂಬ ವಾಕ್ಯಾಂಶವಿದೆ. ಅಲ್ಲದೆ ಅಷ್ಟಮಾಶ್ವಾಸದಲ್ಲಿ ಮೂವತ್ತನೆಯ ಪದ್ಯ ಹೀಗಿದೆ-

ಇದು ಕೃಷ್ಣನದಿದು ಪಾರ್ಥನ
ದಿದು ಕವಿ ಕೇಶವನದೆನಿಸಿ ಸತ್ವಾವಲೋಕಾ॥
ಸ್ಪದ ಸತ್ವಾವಲೋಕನ ಕಾ
ವ್ಯದ ವಿಸ್ತೃತಿಯಾಯ್ತು ಕಾಣ್ಕೆ ಕನ್ನಡಕೇಗಳ್ ॥ [೮: ೩೦]

ಈ ಪದ್ಯದಲ್ಲಿ ಹೇಳುವಂತೆ ಈ ಕಾವ್ಯವು ಶ್ರೀಕೃಷ್ಣ-ಅರ್ಜುನ-ಕವಿ ಕೇಶವ-ಎಂಬೀ ಮೂವರ ಸತ್ವದ ಆಲೋಕನಕ್ಕೆ ಆಸ್ಪದವಾಗಿರುವ 'ಸತ್ವಾವಲೋಕನ ಕಾವ್ಯ'ವೆಂದು ಪ್ರಕಾಶವಾಗುವುದು. ಹಾಗಿದ್ದರೆ ಆ ಪದದ ಅರ್ಥವೇನು?

'ಸತ್ವ' ಎಂಬುದಕ್ಕೆ ಬಲ, ಸಾಮರ್ಥ್ಯ, ಸದ್ಭಾವನೆ, ವ್ಯವಸಾಯ, ಮನಸ್ಸು-ಮುಂತಾದ ಅರ್ಥಗಳಿವೆ. ಆಲೋಕ. ಅಥವಾ ಆಲೋಕನ-ಎಂದರೆ, ಪ್ರಕಾಶಪಡಿಸುವಿಕೆ, ನೋಡುವಿಕೆ-ಎಂಬ ಅರ್ಥಗಳಿವೆ. ಇದರಲ್ಲಿ ಶ್ರೀ ಕೃಷ್ಣನು ಅರ್ಜುನನ ಸತ್ವವನ್ನು ನೋಡಲು ಹವಣಿಸಿದ್ದನೆಂದು ಒಂದೆಡೆ ಶಿವನ ಮಾತಿನಲ್ಲಿ ಬಂದಿದೆ. ಅದನ್ನು ನೋಡಿ ಮುಂಬರಿವುದೆ ಲೇಸು.

ಹರಿಯೆನ್ನಂಶಜನೊಳ್ಪಿದಂ ಮರೆವಿಸಂ ಕೃಷ್ಣಾಖ್ಯೆಯಿಂ ಪುಟ್ಟಿ ದು
ಷ್ಟರನುನ್ಮೂಲಿಸುತಲ್ಲಿ ಭಾರತ ಮಹಾ ಸಂಗ್ರಾಮದೊಳ್ ನೇಹಿಗಂ॥
ನರನಿಂದೆಯ್ದೆ ದ್ರೋಣಕರ್ಣಸಲ್ಯನ ಬಲ್ಪಂ ಸಾಹಸಮಂ ಶೌರ್ಯಮಂ
ಪ್ರಕಟಾಟೋಪಮುಮಂ ತಾನೆಂದರಿಯಲೀ ಭೂಭಾಗದೊಳ್ ಕಾಂಕ್ಷಿಸಂ॥
[೩-೬೧]

ಇದು ಶಿವನ ಮಾತಲ್ಲದೆ, ಕೃಷ್ಣನು ಎಲ್ಲಿಯೂ ಈ ಕಾವ್ಯದಲ್ಲಿ ಹೀಗೆ ತನ್ನ ಉದ್ದೇಶವಿದ್ದಂತೆ ಹೇಳಿಕೊಂಡಿಲ್ಲ; ಆದರೆ ಸನ್ನಿವೇಶವು ಹಾಗೆ ಕೈಗೂಡಿಬಂದಂತೆ ತೋರುತ್ತದೆ. ಮಹಾಪುರುಷರು ಸ್ವತಃ

ಭಾವಿಸಿರಲಿ, ಭಾವಿಸದಿರಲಿ, ಅವರ ಧ್ಯೇಯವೂ ಧ್ಯೇಯಕ್ಕೆ ಅನುಕೂಲತೆಯೂ ಏನೋ ದೈವಿಕ ಕಾರಣದಿಂದಲೇ ಕೂಡಿ ಬರುವುದು ಸಹಜ. ಅಂತೂ ಶ್ರೀಕೃಷ್ಣನು ಅರ್ಜುನನ ಸತ್ವವನ್ನು ಪರೀಕ್ಷಿಸಿ ನೋಡುವುದೇ ಈ ಕಾವ್ಯಕ್ಕೆ ವಸ್ತುವಾದುದರಿಂದಲೂ ಈ ಕಾವ್ಯವಿಡಿಯಾಗಿ ಶ್ರೀ ಕೃಷ್ಣನ ಲೀಲಾಸತ್ವವನ್ನೂ ಪ್ರತಿಜ್ಞಾ ಪಾಲನಾದಿ ಸದ್ಗುಣಗಳನ್ನೂ ಪ್ರಕಟಪಡಿಸುವುದರಿಂದಲೂ ಇದು ಶ್ರೀ ಕೃಷ್ಣನ 'ಸತ್ವಾವಲೋಕನ' ವೆನಿಸುವುದು. ಅರ್ಜುನನು ಆಶ್ರಿತವತ್ಸಲನಾಗಿ ಸತ್ವಾತಿಶಯನಾಗಿ ಖೇಚರನನ್ನು ರಕ್ಷಿಸುವುದಕ್ಕಾಗಿ ಎದುರಾಳಿಯು ತನ್ನ ಭಾವ ನೆಂಟನಾದರೂ ಶ್ರೀ ಹರಿಯಾದರೂ ಗಣಿಸದೇ ಆ ಶ್ರೀ ಕೃಷ್ಣನೊಡನೆ ತತ್ವಕ್ಕಾಗಿ ಹೋರಾಡಿ ತನ್ನ ಸಾಮರ್ಥ್ಯವನ್ನು ಮೆರೆಯಿಸಿದುದರಿಂದ (ಸತ್ವಾಲೋಕನಂ ಗೆಯ್ದುದರಿಂದ) ಇದು ಪಾರ್ಥನ ಸತ್ವಾಲೋಕನವೆನಿಸುವುದು. ಕವಿಯ ಸತ್ವಾವಲೋಕನವು ಇದು ಆಗುವುದು ಹೇಗೆ? ಕನ್ನಡದ ಸಾಹಿತ್ಯಚರಿತ್ರೆಯನ್ನು ನೋಡಿದರೆ, ಚಂಪು ಕಾವ್ಯಗಳು ಹೆಚ್ಚಾಗಿ ಆಶ್ರಯದಾತರ ಪ್ರಭಾವದಿಂದಲೇ ಉದ್ಭವಿಸಿ ಬೆಳಕಿಗೆ ಬಂದಂತೆ ಕಾಣುತ್ತದೆ. ಕವಿಗಳಿಗೆ ಆಶ್ರಯದ ಬಲ ಕುಗ್ಗಿದ ಕಾಲಗಳಲ್ಲಿ ಮಾರ್ಗಕಾವ್ಯಗಳ ಹೊನಲಿಗೆ ಬೇಸಗೆಯೊದಗಿ ದೇಸಿಗಬ್ಬಗಳು, ಅಂದರೆ-ಷಟ್ಪದಿ, ರಗಳೆ ಮುಂತಾದ ಸರಳ ಶೈಲಿಯ ಹಾಗೂ ಕಡಿಮೆ ಬಿಗುಪಿನ ಕಾವ್ಯಗಳು ಬೆಳಕಿಗೆ ಬಂದುದು ಕಾಣುವುದು. ಈ ಸತ್ವಾಲೋಕನ ಕಾವ್ಯವಾದರೆ, ಯಾವ ರಾಜರಿಂದಾಗಲೀ ಆಶ್ರಯದಾತರಿಂದಾಗಲೀ ಪ್ರೋತ್ಸಾಹಿತವಾಗಿ ಬರೆದುದಲ್ಲ. ಇದು ಕವಿಯ ಅಂತಸ್ಸತ್ವದ ಪ್ರತೀಕವಾಗಿ ಹೊರಹೊಮ್ಮಿದೆಯೆಂದು ನಿರ್ಧಾರವಾಗಿ ಹೇಳಬಹುದು. ಈ ಶತಮಾನದಲ್ಲಿಯೂ ಇಂತಹ, ಸುದೀರ್ಘ-ಕಾವ್ಯ ತಪಃ ಫಲೈಕ ಸಾಧ್ಯವಾದ ಲಕ್ಷಣ ಬದ್ಧವಾದ ಕಾವ್ಯವನ್ನು ಓರ್ವನು ರಚಿಸಿದುದೆಂದರೆ, ಅದು ಕವಿಯ ಅಂತಸ್ಸತ್ವದ ಹಾಗೂ ಕವಿತಾ ಸಾಮರ್ಥ್ಯದ ಅಲೋಕನವಲ್ಲದೆ ಮತ್ತೇನು! ಆದುದರಿಂದಲೇ ಇದು ಕವಿಯ ಸತ್ವಾಲೋಕನವು.

## ಕಾವ್ಯ ಮತ್ತು ಕವಿ

ಚಂಪುಶೈಲಿ, ಎಂದ ಮಾತ್ರಕ್ಕೆ ಕಾವ್ಯಕ್ಕಾಗಲೀ ಕವಿಗಾಗಲೀ ಮಹತ್ವ ಬಂತೆಂದು ಯಾರೂ ಭಾವಿಸಲಾಗದು. ಕವಿಯು ವಿಕಸಿತ ಸಾಮಾಜಿಕನಾಗಿರಬೇಕು. ಅವನಲ್ಲಿ ಭಾವನಾಶಕ್ತಿ ಭಾಷಾಶಕ್ತಿಗಳೊಂದಿಗೆ ಆಳವಾದ ತಿಳಿವು ಮತ್ತು ಔಚಿತ್ಯ ಪರಿಜ್ಞಾನವಿರಬೇಕು. ಆತನ ಕಾವ್ಯವೆಂಬುದು ಜೀವನ ಸಂಸ್ಪರ್ಶಿಯಾಗಿರಬೇಕು. ಈ ವಿಚಾರಗಳು ಈ ಕಾವ್ಯದಲ್ಲಿ ಸಂದರ್ಭೋಚಿತವಾಗಿ ಅಲ್ಲಲ್ಲಿ ಬಿಕ್ಕಿ (ಹರಡಿ) ಕೊಂಡಿರುವುದನ್ನು ಕಾಣಬಹುದು.

ಕಾವ್ಯಾರಂಭದ ಪದ್ಯವು ಶ್ಲೇಷದಿಂದ ಶಿವಪರವಾಗಿಯೂ ವಿಷ್ಣುಪರವಾಗಿಯೂ ಇದೆ "ಏಕೋ ದೇವಃ ಕೇಶವೋ ವಾ ಶಿವೋ ವಾ" ಎಂಬ ಭಾವನೆ ಕವಿಗೆ ಇದ್ದುದು ಕಾಣುತ್ತದೆ. ಶಿವನೇ ದೇವರೆಂದು ನಂಬುವವರು ಹಾಗೆಯೇ ನಂಬಲಿ, ವಿಷ್ಣುವೇ ಪರದೈವವೆನ್ನುವರು ಹಾಗೆಯೇ ತಿಳಿಯಲಿ- ಎಂಬುದಕ್ಕಾಗಿಯೇ ಶ್ಲೇಷಾರ್ಥದಿಂದ ಸ್ತುತಿಸಲಾಗಿದೆ. ಆತನು ಭಕ್ತರನ್ನು ಕಾಪಾಡಲಿ ಎಂದು ಭಕ್ತರೆಲ್ಲರಿಗೆ ಆಶೀರ್ವಾದರೂಪವಾಗಿ ಮೊದಲನೆಯ ಪದ್ಯವಿದೆ. ನಾಲ್ಕನೆಯ ಸ್ತುತಿ ಪದ್ಯದಲ್ಲಿ ಶಿವನು ಸದ್ಗಣವನ್ನು ಪಾಲಿಸುವಂತೆ ಪ್ರಾರ್ಥಿಸಿದೆ. ಸದ್ಗಣ ಎಂದರೆ ಸತ್ಪುರುಷರ ಸಮೂಹ-ಎಂತಲೂ ಆಗಬಹುದು, ಪದ್ಯರಚನೆಗೆ ಯೋಗ್ಯವಾದ ಗಣಗಳನ್ನು ಒದಗಿಸಿಕೊಡಲಿ-ಎಂತಲೂ ಆಗಬಹುದು. ಮುಂದಿನ ಪದ್ಯದಲ್ಲಿ ಕವಿಯ ಮನಸ್ಸೆಂಬ ರಂಗಸ್ಥಳದಲ್ಲಿ ರುದ್ರದೇವನು ಲೀಲಾನಾಟ್ಯವನ್ನು ನಟಿಸುತ್ತಾ ಪದನ್ಯಾಸದಲ್ಲಿ (ಪದ್ಯ (ರಚನೆಯಲ್ಲಿ) ಸ್ಥಿರತೆಯನ್ನು ನೀಡಲಿ- ಎಂತಲೂ ಸ್ತುತಿ ಮಾಡಿದೆ. ಇದರಿಂದ ಕಾವ್ಯದಲ್ಲಿ ಸಮುಚಿತವಾದ ಗಣಗಳಿರಬೇಕೆಂದೂ ಪದಗಳ ಜೋಡಣೆಯಲ್ಲಿ ಸ್ಥಿರತೆ (ಬಿಗುವು) ಅಂದರೆ, ಓಜೋಗುಣವಿರಬೇಕೆಂದೂ ಸೂಚಿಸಿದಂ

ವಾಗಿದೆ. ಕಾವ್ಯಲಕ್ಷಣವನ್ನು ಕೆಡಿಸದೆಯೂ ಕವಿಮಾರ್ಗವನ್ನು ಬಿಡದೆಯೂ ಹುರುಳನ್ನು ಒಳಗೊಂಡು ರಚಿತವಾದುವುಗಳೇ ಶ್ರೇಷ್ಠ ಕಾವ್ಯಗಳೆಂದು ಮುಂದೆ ಹೇಳಿದೆ. ದ್ವಾರಕೆಯಲ್ಲಿ ಅತ್ತಿತ್ತ ಬೀಸುವ ಗಾಳಿಯ ವರ್ಣನೆಯೊಂದರಲ್ಲಿ ಕವಿಯ ಮತ್ತು ಕಾವ್ಯರಚನೆಯ ಲಕ್ಷಣ ಹೇಗೆ ಧ್ವನಿತವಾಗಿದೆಯೆಂದು ಇಲ್ಲಿ ನೋಡಬಹುದು :—

ಮಾರ್ಗದೆ ಮುಂಬರಿಯುತೆ ಪಿಂ
ಮಾರ್ಗ್ಗೆತ್ತರುಕಂ ಸುಶಬ್ದಯುತನೆಡೆಯರಿಯು ॥
ತ್ತೂರ್ಗೆ ಹಿತಂ ಮರುತಂ ಕವಿ
ಮಾರ್ಗವನೆಂತಂತು ಮಾರ್ಗಮಂ ಪೊಸಯಿಸುವಂ॥ (೧-೨೫)

ದ್ವಾರಕೆಯಲ್ಲಿ ಅಸಂಖ್ಯವಾಗಿ ಅಂಗಡೀಬೀದಿಗಳಿದ್ದು ಅವು ಒಂದನ್ನೊಂದು ಹೋಲುತ್ತಿರುವುದರಿಂದ ವಾಯುವಿಗೆ ಅಲ್ಲಿ ದೆಸೆ ದಾರಿ ತಪ್ಪಿ ಹೋಗುವ ಸಂಭವವೇ ಹೆಚ್ಚು. ಆದುದರಿಂದ ವಾಯು ಅಂಗಡಿಗಳ ಹೆಸರುಗಳನ್ನು ಓದುತ್ತಲೂ ಅಂಗಡಿಯವರ ಗುರುತನ್ನು ನೋಡಿಕೊಳ್ಳುತ್ತಲೂ ಹೀಗೆ ತನ್ನ ವೇಗವು ಕುಂಠಿತವಾದುದರಿಂದ ಮೆಲ್ಲನೆ ಬೀಸುತ್ತಿರುವನೆಂದು ಹಿಂದಿನ ಪದ್ಯದಲ್ಲಿ ಹೇಳಿ, ಆಮೇಲೆ ಮೇಲಿನ ಪದ್ಯ ಬರುವುದು. ಅದರ ಪ್ರಕಾರ ವಾಯುವು ಒಮ್ಮೆ ಮುಂದೆ ಹೋದರೂ ಎಲ್ಲಾದರೂ ಮಾರ್ಗ ತಪ್ಪಿತೋ- ಎಂಬ ಸಂಶಯದಿಂದ ಹಿಂದೆ ಬರುವನು— ಕವಿಯು ಕೆಲವೊಮ್ಮೆ ಬರೆದ ಪಾಠವನ್ನು ಪುನಃ ಸರಿಯೋ ಎಂದು ನೋಡುವುದಕ್ಕಾಗಿ ಹಿಂದಕ್ಕೆ ದೃಷ್ಟಿ ಹಾಯಿಸುವನಷ್ಟೆ. ವಾಯುವು ಒಳ್ಳೆಯ ಶಬ್ದದಿಂದ ಕೂಡಿರುತ್ತಾನೆ, ಎಡೆಯನ್ನು (ಅವಕಾಶವನ್ನು) ತಿಳಿದುಕೊಳ್ಳುತ್ತಾನೆ. ಮತ್ತು ಅವನು ಊರ್ಗೆ ಹಿತಂ (ಲೋಕಕ್ಕೆ) ಹಿತಕರನಾಗುತ್ತಾನೆ—ಈ ಲಕ್ಷಣಗಳು ಕವಿಗೆ ಸರಿಯಾಗಿ ಸಮನ್ವಯವಾಗುತ್ತವೆ. ಎಡೆಯರಿಯುತೆ, ಎಂಬುದನ್ನು ಕವಿಗೆ ಹೊಂದಿಸುವಾಗ (ಎಡೆ=ಸ್ಥಳ; ಸಮಯ] ದೇಶ ಕಾಲವನ್ನು ತಿಳಿದುಕೊಂಡು-

ಎಂದು ಹೇಳಬಹುದು. ಪೊಸಯಿಸುವಂ,- ಗಾಳಿಯು ಮಾರ್ಗವನ್ನು ಉಜ್ಜುತ್ತಿರುವನಾದರೆ, ಕವಿಯು ತನ್ನ ಕವಿತಾ ಮಾರ್ಗವನ್ನು ಹೊಸತು ಮಾಡುವನು. ಹೀಗೆ ಕವಿಯು ತಪ್ಪೊಪ್ಪುಗಳನ್ನು ಪರಿಶೀಲಿಸುತ್ತ, ಒಳ್ಳೆಯ ನುಡಿಗಳನ್ನು ಜೋಡಿಸುತ್ತ ಹೊಸ ಮಾರ್ಗದಲ್ಲಿ ಅಡಿಯಿಡಬೇಕೆಂದು ಸೂಚಿಸಿದೆ. ಆತನಲ್ಲಿ ಲೋಕಹಿತ ಭಾವನೆಯಿರಬೇಕೆಂತಲೂ ಸ್ಪಷ್ಟಪಡಿಸಿದೆ.

ಇಲ್ಲಿ ಒಂದು ಪ್ರಶ್ನೆ ಉದ್ಭವಿಸುವುದು. ಚಂಪು ಕಾವ್ಯವು ಹೊಸತೆನಿಸುವುದು ಹೇಗೆ ಎಂಬುದು. ಇದಕ್ಕೆ ಕಾವ್ಯದಲ್ಲೇ ಉತ್ತರವಿದೆ-

ಪಳಗನ್ನಡಮೆನೆ ಕಬ್ಬದೆ
ಬಳಸುವರೀ ಚಂಪು ತೆರಳ್ವ* ಕಾಲರಥಾಂಗ ||
ಕ್ಕೊಳಗಾಗಿ ಮುಂದೆ ಬಂದುದು
ಪಳತಲ್ತಿದರಲ್ಲಿ ಪೊಸತನರಿವವರರಿವರ್ || (೧-೧೦)

ಚರಿತ್ರೆ ಪುನರಾವರ್ತನೆಗೊಳ್ಳುವುದಷ್ಟೆ. ಕಾಲಚಕ್ರಕ್ಕೆ ಸಿಕ್ಕಿದ ಚಂಪು ಈಗ ಪುನರಾವರ್ತನೆಗೊಂಡಿದೆಯಷ್ಟೆ ತಿಳಿದರೆ, ಇದು ಹೊಸತಾದ ಕಾವ್ಯಮಾರ್ಗವೆಂದು ತಿಳಿದುಕೊಳ್ಳಬಹುದು.

ಕವಿಯ ಲಕ್ಷಣವನ್ನು ತಿಳಿಸುವ ಇನ್ನೊಂದು ಭಾಗವು ಮುಂದೆ ಯುದ್ಧದ ಪ್ರಸಂಗದಲ್ಲಿ ಬರುವುದು. ಯಾದವವೀರನಾದ 'ಕವಿ' ಎಂಬವನೊಡನೆ ಕಾದಲು 'ಪೂರ್ಣ ಭರದಿಂ' ಬಂದ ವಿಕರ್ಣನ ಮಾತನ್ನು ಪರಿಶೀಲಿಸಬೇಕು—ಮತ್ಸರ ರಾಹಿತ್ಯ, ಸಮತಾಭಾವನೆಗಳು ಕವಿಗಿರಬೇಕು. ಆತನು ಹೊಸತಾದ, ಗುರು ಮಾರ್ಗದಿಂದ ಕೂಡಿದ, ಶಾಸ್ತ್ರಕ್ಕೆ ಅನುಸಾರವಾದ ಮತ್ತು ಪೂಜ್ಯವಾದ ಕೃತಿಯನ್ನು ರಚಿಸಬೇಕು. ಅಧಮ ಸಾಮಾಜಿಕನಾಗಿದ್ದು ತನಗೊಬ್ಬನಿಗೆ ಇದು ಹಿತ

ವೆಂದು ಮನಸ್ಸಿಗೆ ಬಂದಂತೆ ಬರೆಯುತಕ್ಕವನು ಎಂದಿಗೂ ಯೋಗ್ಯನಲ್ಲ ಎಂಬ ವಿಚಾರ ಹೊರಹೊಮ್ಮಿದೆ. ಚಂಪು ಕಾವ್ಯದಲ್ಲಿ ಸತ್ವಣಾಭ್ಯವಹಾರಿಗಳು ಅರೋಚಕರೆಂದು ಕವಿಯ ಅಭಿಪ್ರಾಯವಿದೆ.

ಇಷ್ಟನ್ನು ಹೇಳಿದುದರಿಂದ ಸತ್ವಾಲೋಕನದ ಕವಿಯು ಕೇವಲ ಸಂಪ್ರದಾಯ ಶರಣನೆಂದಾಗಲೀ ಔಚಿತ್ಯ ಜ್ಞಾನವಿಲ್ಲದವನೆಂದಾಗಲೀ ತಿಳಿಯುವುದು ದ್ರೋಹವಾಗಬಹುದು. ಅಷ್ಟಾದಶ ವರ್ಣನೆಗಳೆಲ್ಲವೂ ಇದರಲ್ಲಿ ಸಿಗಲಾರವು. ಆದಿಯಲ್ಲಿ ಸಮುದ್ರ ವರ್ಣನೆ ಬಂದಿದೆ ನಿಜ ಆದರೆ ಅದು ಅನುಚಿತವಾಗಿ ತಂದು ತುರುಕಿದ ಅಂಶವಲ್ಲ, ದ್ವಾರಕಾ ಪತ್ತನವನ್ನು ಕುರಿತು ಹೇಳುವುದಕ್ಕೆ ಪೂರ್ವಭಾವಿಯಾಗಿ ಅದನ್ನು ಆವರಿಸಿದ ಕಡಲ ಮಾತನ್ನೆತ್ತಬೇಕಾಗಿ ಬಂದುದು ಸಹಜ. ಆ ಸಮುದ್ರ ವರ್ಣನೆಯಲ್ಲಿ ಹೊಸತನ ಮಿರುಗುತ್ತಿದೆ, ನೀತಿ ವಿಚಾರಗಳು ನರ್ತನಮಾಡುತ್ತಿವೆ.

## ಕಾವ್ಯೋದ್ದೇಶ

ಕಾವ್ಯ - ನಾಟಕಾದಿಗಳು ಆಹ್ಲಾದಕರ ಸಾಹಿತ್ಯವೆನಿಸುತ್ತದೆ. ನಾಟಕವೆಂಬುದಂತೂ ದೃಶ್ಯವೆನಿಸುವುದರಿಂದ ಅದನ್ನು ಬೇರ್ಪಡಿಸಿದರೆ ಉಳಿದ, ಕಾವ್ಯಗಳು ಶ್ರವ್ಯವೆನಿಸುತ್ತವೆ. ಶ್ರವ್ಯಕಾವ್ಯಗಳಲ್ಲಿ 'ಗದ್ಯಂ ಹೃದ್ಯಂ' ಎಂದೂ 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂದೂ ಉಕ್ತಿಗಳು ಗದ್ಯಕಾವ್ಯದ ಮೇಲ್ಮೆಯನ್ನು ಸ್ಥಾಪಿಸಿವೆ. ಆದರೆ ಪದ್ಯ ಕಾವ್ಯವು ರಸ-ಭಾವ-ಧ್ವನಿ-ಅರ್ಥನಿರೂಪಣೆಗಳಲ್ಲಿ ಮೇಲ್ಮಟ್ಟದ ಕೃತಿಯೆನಿಸುವುದಲ್ಲದೆ ಕವಿಯ ಪ್ರತಿಭೆ, ಅಭ್ಯಾಸ, ಕಾವ್ಯಪರಿಜ್ಞಾನಾದಿಗಳ ಉತ್ಕೃಷ್ಟ ಪ್ರತೀಕವೆನಿಸುವುದು. "ಛಂದಸ್ಸು ಕವಿತೆಯ ಪರಿಷ್ಕೃತಿಯ ಒಂದು ಅಂಗವಾಗಿದೆ" ಎಂದು ಆರ್ನೋಲ್ಡ್ ಎಂಬುವರು ಹೇಳಿದ್ದಾರೆ. ಹೀಗಿರುವಾಗ ಗದ್ಯ-ಪದ್ಯ ಮಿಶ್ರವಾದ ಕಾವ್ಯವೆಂದ ಮೇಲೆ, ಅದು ಮೇಲ್ತರಗತಿಯ ಕೃತಿಯೆನಿಸುವುದೆನ್ನಲು ಅಡ್ಡಿಯಿಲ್ಲ.

ಕಾವ್ಯೋದ್ದೇಶವು ಆನಂದವೊಂದೇ ಅಲ್ಲ. ಆ ಆನಂದದೊಂದಿಗೆ ಕಾಂತ ಸಮ್ಮಿತವಾದ ಉಪದೇಶವನ್ನು ಮಾಡಿ ಉತ್ತಮ ಜೀವನ ದರ್ಶನವನ್ನು ನೀಡಿ ಸಂಸ್ಕೃತಿಗೆ ಪೋಷಕಾಂಶಗಳನ್ನು ಊಡುವುದು ಭಾರತೀಯ ಕಾವ್ಯಗಳ ನಿಜನಿಕಷವಾಗಿದೆ-ಎಂದಮೇಲೆ ಈ ಕಾವ್ಯವನ್ನು ಆ ದೃಷ್ಟಿಯಿಂದ ನೋಡುವುದು ಅವಶ್ಯಕ.

„ ಲೋಕಕೆ ಸದಧ್ವವನಿಂತುಟೆನುತ್ತೆ ತೋರ್ಪ ಕೃಷ್ಣಾರ್ಜುನರಾರ್ಯ ಚರ್ಯೆಯ ಅಂಶ ” ವನ್ನು ಇದರಲ್ಲಿ ಬಣ್ಣಿಸಲೆತ್ನಿಸಿಕೊಂಡಿದೆ.

ಆ ಶ್ರೀಕೃಷ್ಣ-ಅರ್ಜುನರ ಆರ್ಜವ (ಋಜುಸ್ವಭಾವ), ಶೌರ್ಯಗಳು ನಮ್ಮಲ್ಲಿ ಉಂಟಾಗಬೇಕು ; ಅವರೊಡನಾದ ಸ್ನೇಹವೂ ನೆಲೆಗೊಳ್ಳಬೇಕು. ಸತ್ಯವಾಕ್ ಪರಿಪಾಲನೆಯ ಮೂಲಕ ಕೀರ್ತಿಯುಂಟಾಗಬೇಕು. ಈ ಕಾವ್ಯದ ಕಥೆಯಲ್ಲಿ ಸತ್ಯಕ್ಕಾಗಿ ಪರಸ್ಪರ ಕಾದಾಡುವ ಪರಿಸ್ಥಿತಿಯು ಕೃಷ್ಣಾರ್ಜುನರಿಗೆ ಒದಗಿದರೂ ಅದು ದ್ವೇಷಕ್ಕೆ ಉದ್ದೀಪನವಾಗಿ ಮತ್ತೆ ಉಳಿಯದೆ ಸ್ನೇಹಕ್ಕೆ ಕಾರಣವೇ ಆಯಿತು. ಶಿವನು ಪ್ರಸನ್ನನಾಗಿ ಶ್ರೀ ಕೃಷ್ಣಾರ್ಜುನರಿಗೆ ಮಾಡಿದ ಉಪದೇಶವು ಈ ಕಾವ್ಯೋದ್ದೇಶದ ಸಾರವೆಂಬಂತೆ ತೋರುವುದು.

ಕೆಳೆಯೊಂದೆ ಬೇಳ್ಪ ಪುರುಳಾ
ಕೆಳೆ ನಿಮ್ಮಲ್ಲಗಲದಿರ್ಕೆ ಯಿಾ ಕೆಳೆತನಮುಂ ||
ಇಳೆಯಲ್ಲಿ ಸಾರಿ ನಿಚ್ಚಂ
ಬಳೆವಂತೆಸಗುವುದು ಧರ್ಮಮುಂ ಶಾಂತಿಯುಮಂ || (೮-೨೯)

## ಈ ಕಾವ್ಯದಲ್ಲಿ ಪ್ರತಿಪಾದಿತವಾದ ಮಾನವಧರ್ಮ

ಧರ್ಮವೆಂಬರೆ ಮಾನವ ಧರ್ಮವೇ. ಧಾರಣೆ ಮಾಡುವುದರಿಂದಲೇ ಧರ್ಮವೆನಿಸುವುದು. ಮಾನವಕೋಟಿಯ ಕಲ್ಯಾಣಕ್ಕೆ ಉಪಾದೇಯಗಳಾದ ಆಚಾರವಿಚಾರಗಳು ಧರ್ಮದಲ್ಲಿ ಅಂತರ್ಗತವಾಗುತ್ತವೆ. ಧರ್ಮದ

ಲಕ್ಷಣವೆಂದರೆ, ಸದ್ಗುಣಗಳು. ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯದಲ್ಲಿ " ಅದ್ವೇಷ್ಟಾ ಸರ್ವಭೂತಾನಾಂ, ಮೈತ್ರಃ, ಕರುಣ ಏವಚ...." ಇತ್ಯಾದಿಯಾಗಿ ಇಪ್ಪತ್ತನಾಲ್ಕು ಸದ್ಗುಣಗಳನ್ನು ಧರ್ಮ್ಯಾಮೃತವೆಂದು ಕರೆದುದನ್ನು ಪರಾಂಬರಿಸಬಹುದು. ಈ ಕಾವ್ಯದಲ್ಲಿ ಸತ್ಯ, ಶೌರ್ಯ, ಸಾಹಸ, ಋಜುತ್ವ, ನ್ಯಾಯಶೀಲತೆ, ಗಾಂಭೀರ್ಯ, ಪರೋಪಕಾರ, ಆಶ್ರಿತವಾತ್ಸಲ್ಯ, ಸ್ವಾಮಿಭಕ್ತಿ, ದೈವಭಕ್ತಿ, ಕರ್ತವ್ಯನಿಷ್ಠೆ, ಸಮಾನತೆ, ಪಾತಿವ್ರತ್ಯ, ಉತ್ತಮ ಧ್ಯೇಯ ತತ್ಪರತೆ, ಸರ್ವಜನಹಿತ ಬುದ್ಧಿ, ವಿವೇಕ-ಮುಂತಾದ ಸದ್ಗುಣಗಳನ್ನು ಕಾವ್ಯದ ಉದ್ದಕ್ಕೂ ಕೈವಾರಿಸಿರುವುದನ್ನು ಕಾಣಬಹುದು :

ಗಯನಿಗೆ ಕೈಲಾಸ ಪರ್ವತದಲ್ಲಿ ಒಬ್ಬ ಋಷಿವರ್ಯನು ಮಾಡಿದ ಉಪದೇಶದಲ್ಲಿ ಧರ್ಮದ ವ್ಯಾಖ್ಯೆ ಹೀಗಿದೆ—

ಹಿತಮಿಳೆಗದು ಧರ್ಮಮು
ಹಿತಮುಪ್ಪುದಧರ್ಮಮುಪ್ಪುದು............... (೩-೪೯)

ಹಾಗೆಯೇ ಶೀಲವೆಂದರೆ,—

ದೇವನದೃಶ್ಯಂ ದೃಶ್ಯಂ
ಜೀವ ಶರೀರಾಶರೀರ ಮವನಂಶವಿದಂ ||
ಭಾವಿಸಿ ಸರ್ವೋಚಿತಸಮ
ಭಾವದೆ ತನ್ನಂತೆ ಪೆರರನರಿವುದೆ ಶೀಲಂ || (೩-೪೮)

ಪರಮಾತ್ಮನು ನಿರಾಕಾರನಾದುದರಿಂದ ಅದೃಶ್ಯನೆನಿಸುವನು. 'ಸರ್ವಂ ಬ್ರಹ್ಮಮಯಂ ಜಗತ್' ಎಂಬುದರಿಂದ ದೃಶ್ಯವಾಗಿರುವುದು ಕೂಡಾ ಪರಮಾತ್ಮನೇ- ಎಂದು ತಿಳಿಯಬೇಕು. ಜೀವರ ದೇಹವೂ ದೇಹೇತರವಾದ ಆತ್ಮವೂ ಅವನ ಅಂಶವೆಂದೇ ತಿಳಿಯಬೇಕು. ಆಗ ಮಾತ್ರ ಸಮತಾ ಭಾವನೆ ಬರಲು ಎಡೆಯಾಗುವುದು. ಇಂತಹ ಸಮತಾಭಾ

ವನೆ ವ್ಯಕ್ತಿವ್ಯಕ್ತಿಯಲ್ಲಿ ನೆಲೆಯಾಗಿ ತನ್ನಂತೆ ಇತರರನ್ನು ತಿಳಿಯು ವುದೇ ಉತ್ತಮ ಶೀಲನೆಂಬುದು ಸತ್ಯ-ನ್ಯಾಯ ಮತ್ತು ಯುಕ್ತಿಗೆ ಸಂಗತವೆನಿಸುವುದು, ಇದನ್ನೇ ಮಹಾಭಾರತವು "ಆತ್ಮವತ್ ಸರ್ವ ಭೂತಾನಿ ಯಃಪಶ್ಯತಿ ಸ ಪಶ್ಯತಿ " ಎಂದು ಹೇಳಿದೆ.

ಮೇಲಿನ ಉದಾಹರಣೆಗಳಿಂದ ಈ ಕಾವ್ಯದಲ್ಲಿ ಮಾನವ ಧರ್ಮವೇ ನಿರೂಪಿತವಾಗಿದೆಯಲ್ಲದೆ, ಯಾವುದೊಂದು ಮತದವರಿಗೆ ಅಥವಾ ಕೆಲವೇ ವ್ಯಕ್ತಿಗಳಿಗೆ ಸಂಬಂಧಿಸುವ ಸಂಕುಚಿತಾರ್ಥದಲ್ಲಿ ಧರ್ಮವು ಪ್ರತಿ ಪಾದಿತವಾಗಿಲ್ಲವೆಂದು ನಿರ್ಧಾರವಾಗಿ ಹೇಳಬಹುದು.

## ಮತ-ತತ್ವ-ಜಾತಿ-ನೀತಿ ವಿಚಾರ

ಕವಿ ಹರಿ-ಹರರಲ್ಲಿ ಭೇದವಿಲ್ಲವೆಂದು ನಿರೂಪಿಸೇವುದಾದರೂ ಅಲ್ಲಲ್ಲಿ ಶಿವನೇ ಪರದೈವವಾಗಿ ಈ ಕಾವ್ಯದಲ್ಲಿ ವರ್ಣಿತನಾಗಿದ್ದಾನೆ. ಶ್ರೀ ಕೃಷ್ಣನು ಮಾನವಾಕಾರನು. ಅವನನ್ನೂ ಅರ್ಜುನನನ್ನೂ ಉದ್ದೇಶಿಸಿ ಪರಶಿವನು ಕರ್ತವ್ಯ ನಿರೂಪಣೆ ಮಾಡುವುದನ್ನು ಕಾಣ ಬಹುದು—

"ಜಗದೊಳ್ ನಿಮ್ಮಿಂದೆ ಮಾಡಲ್ಪಡುವವೊಳವು ಮೇಲ್ಪಿಂದು
ಗಜ್ಜಂಗಳ್"

"ಕೆಳೆ ನಿಮ್ಮಿಲ್ಲಗಲದಿರ್ಕೆ"—ಇಲ್ಲಿ, ಶಿವನು ಅವರಿರ್ವರಿಗೆ ಅಧಿದೇವ ನಾಗಿದ್ದಾನೆ. ಅಲ್ಲದೆ 'ಹರಿಯೆನ್ನಂಶಜಂ'-ಎಂದೂ ಶಿವನು ಶ್ರೀ ಕೃಷ್ಣನ ವಿಷಯವಾಗಿ ಆಡಿದ್ದಾನೆ. ಇದಲ್ಲದೆ, ಇನ್ನೊಂದು ಪದ್ಯವನ್ನು ಇಲ್ಲಿ ಉದಾಹರಿಸಬಹುದು—

ವಸುಧಾಭಾರವನಿಳಿಸೆ ಗಿ
ರಿಸನಾಣತಿವಡೆದು ಪುಟ್ಟಿಯಿಾ ಹರಿ ದುರುಳ ||
ಪ್ರಸರವನಳಿಸುವನೆನುತುಂ
ನಿಸದಂ ಪೇಳ್ವಲ್ಲಿ ಸಂದೆಯುಂ ಬಂದಪುದೇ || (೨-೫)

ಸಂಶಯುವು ಬಾರದೆಂದು ಹೇಳಿದ ವಿಷಯುದಲ್ಲಿಯೇ ಹಲವರಿಗೆ ಸಂಶಯು ಬರಲೆಡೆಯಿದೆ—

ಶ್ರೀ ಕೃಷ್ಣನಿಗೆ ಯಾರ ಆಜ್ಞೆಯೂ ಇರಲಿಲ್ಲ. ಸ್ವಯಂಭುವಾದ ಆತನೇ ಭೂದೇವಿ-ದೇವತೆಗಳ ಪ್ರಾರ್ಥನೆಗೊಲಿದು ಅಭಯುವಿತ್ತು ಕೃಷ್ಣಾವತಾರಿಯಾಗಿ ಹುಟ್ಟಿರುವಾಗ ಆತನಿಗೆ ಗಿರಿಶನ ಅಣತಿಯೆಂಬು ದಕ್ಕೆ ಆಧಾರನೇನು ? ಪ್ರಶ್ನೆಯಿದು ತಲೆತಿರುಗಿಸುವಂತಹದೇ. ಅದಕ್ಕೆ ಉತ್ತರವೂ ಸಮಾಧಾನಕರವಾದುದೇ ಇದೆ.

ಶ್ರೀ ಕೃಷ್ಣನು ಅವತರಿಸಿ ಬಂದವನಾದುದರಿಂದ ಆವನಿಗೆ ಹಾಗೆ ಬರಲು ಮೂಲವಸ್ತುವಾದ ಪರಮಾತ್ಮನೊಬ್ಬನ ಆಜ್ಞೆ ಬೇಕೇ ಬೇಕು. ಆ ಪರಮಾತ್ಮನನ್ನು ಇಲ್ಲಿ ಶಿವನೆಂದು [ಗಿರಿಶನೆಂದು] ಕರೆದಿದೆ-ಎಂದು ಸಮಾಧಾನ ಹೇಳಬಹುದು. ಇದಕ್ಕಿಂತಲೂ ಪೌಷ್ಟಿಕವಾದ ಶುದ್ಧವಾದ ಸಮಾಧಾನವಿನ್ನೊಂದಿದೆ :—ತ್ರಿಮೂರ್ತಿಗಳಲ್ಲೊಬ್ಬನಾದ ವಿಷ್ಣು ಪಾಲನಾ ಕರ್ತವ್ಯವಲ್ಲದೆ, ಸಂಹಾರಕನಲ್ಲ, ಸಂಹಾರವು ಹರನ ಕೆಲಸವಷ್ಟೆ. ಆ ಹರನ ಕಾರ್ಯವನ್ನು ಶ್ರೀ ಕೃಷ್ಣನು ಮಾಡಬೇಕಿದ್ದರೆ, ಆತನ ಅಪ್ಪಣೆ ಬೇಡವೆ ? ತನ್ನ ಕಾರ್ಯವನ್ನು ಬಿಟ್ಟು ಹೇಳದೆ-ಕೇಳದೆ ಅನ್ಯರ ಕೆಲಸವನ್ನು ಮಾಡುವಾತನೇ ಲೋಕಕ್ಕೆ ಮಾರ್ಗದರ್ಶಕನಾದ ಶ್ರೀ ಕೃಷ್ಣ ? ಗಿರಿಶನ ಅಣತಿ ಪಡೆದು ಹುಟ್ಟಿ ದುರುಳರ ಸಂಹಾರ ಮಾಡಿದೆನೆಂದು ಹೇಳಿದುದರಲ್ಲಿ ಶ್ರೀ ಕೃಷ್ಣನ ವ್ಯಕ್ತಿತ್ವಕ್ಕೆ ಕೊಳೆ ಬಾರದು, ಕಳೆಯೇ ಬರುವುದು. ಅತನು ತನ್ನ ಕರ್ತವ್ಯದ ಸೀಮೋಲ್ಲಂಘನೆಯನ್ನು ಮಾಡದೆ, ತನ್ನ ಕರ್ತವ್ಯದ ಪರಿಧಿಯೊಳಗೇ ಸುಳಿದು ಆದರ್ಶನಾದನೆಂದು ಕೊಂಡಾಡಿದಂತೆಯೇ ಆಗಿದೆ.

ದೇವಾಲಯು, ಬ್ರಾಹ್ಮಣ, ಮಡಿ ಮೈಲಿಗೆಗಳ ವಿಚಾರದಲ್ಲಿ ಈ ಕಾವ್ಯವು ಸರ್ವಮಾನ್ಯವಾಗುವ ವಿಚಾರವನ್ನಿಟ್ಟಿದೆ. ಇಪ್ಪತ್ತನೆಯ ಶತಮಾನವೆಂದು- ವಿಜ್ಞಾನಯುುಗವೆಂದು, ಯಾರೂ ಮೇಲಿನ ವಿಚಾರ

ಗಳಲ್ಲಿ ಮೈಲಿದೂರ ಬಿಟ್ಟೋಡಬೇಕಾಗಿಲ್ಲ. ಅವೆಲ್ಲವೂ ನಿಜವಾದ ಅರ್ಥದಲ್ಲಿದ್ದರೆ ಸಮಾಜಕ್ಕೆ ಕ್ಷೇಮಕರವಲ್ಲದೆ ಬಾಧಕಗಳಲ್ಲ-ಎಂಬ ಧ್ವನಿ ಸಿಗುತ್ತದೆ. ದೇವಾಲಯಗಳು ಸರ್ವಮಾನವ ಸರ್ವೇಷ್ಟದವಾಗಿವೆಯಲ್ಲದೆ ಅಲ್ಲಿ ಸಮಾಜ ಹಿತಕಾರ್ಯ ಕಲಾಪಗಳೇ ಇರುತ್ತವೆ. ಪರಿಶುದ್ಧವಾದ ಆಚಾರ ವಿಚಾರವೇ ಬ್ರಾಹ್ಮಣತ್ವವೆಂದು ಈ ಕಾವ್ಯವು ಸೂಚಿಸಿದೆ. ಹೊಲೆತನವಿರುವುದು ಕೊಳಕಿನಲ್ಲಿಯೂ, ಅಶುದ್ಧತೆಯಲ್ಲಿಯೂ ಮಾತ್ರ. ಮೈಲಿಗೆಯೆಂಬುದು ವರ್ಣದ ಅಥವಾ ಜಾತಿಯ ಚಿಹ್ನೆಯಲ್ಲ; ಶುದ್ಧತೆಯೇ ಮಡಿ. ಹೀಗಿದ್ದರೆ ಇವುಗಳಲ್ಲಿ ಯಾವುದು ತಾನೇ ತ್ಯಾಜ್ಯವೆನಿಸೀತು?

## ಕಾವ್ಯ ತತ್ವವಿಚಾರ

ಕತೆ ಗೆಲ್ ಭಾವಲರ್ ಸದರ್ಥಮೆ ಫಲಂ ಶಬ್ದಂ ಕುಕಿಲ್ ಛಂದಮು
ನ್ನಿತಪರ್ಣಂ ರಸಜೀವಮಾಗೆ ಪುರುಡೆಂಬಾ ಮಾರುತಾಘಾತದಿಂ ||
ಕೃತಿಭೂಜಂ ಕೆಡೆ ಬೀಳದಂತೆ ತಳೆವಾ ತಾಯ್ಬೇರವ್ಹೋಲ್ ದೇವಿ ವಾ
ಕ್ಸತಿ ಮತ್ಕಾವ್ಯವನಾಂತು ರಂಜಿಸುಗೆ ವಿದ್ಯಾಲೋಕಮಂ

ಲೋಕಮಂ (೧-೬)

ಈ ಪದ್ಯವು ಈ ಕಾವ್ಯದ ವಿಷಯವಾದ ಕವಿ-ಮನೋಭಾವವನ್ನು ಪ್ರಕಟಿಸುತ್ತಿದೆ. ಇಲ್ಲಿ ಹೇಳಿದಂತೆ ಈ ಸತ್ಯಾಲೋಕನ ಕಾವ್ಯವೆಂಬುದೊಂದು ವೃಕ್ಷವು (ಕೃತಿಭೂಜಂ), ಈ ಕಾವ್ಯದ ಗೆಲ್ಲುಗಳಾಗಿ ಇದರಲ್ಲಿ ಅಡಕವಾದ ಕಥೆಯಿದೆ, ಪುಷ್ಪವೇ ಭಾವವು, ಹಣ್ಣೆಂಬುದು ಶ್ರೇಷ್ಠವಾದ ವಿಚಾರವು, ಕೋಕಿಲರವವೇ ಶಬ್ದವು, ಎಲೆಯೇ ಛಂದಸ್ಸು, ಪ್ರಾಣವೇ ರಸವು, ಇದನ್ನು ಬಲವಾಗಿ ಆಧರಿಸಿ ವಿದ್ಯಾಲೋಕವನ್ನೂ ಲೋಕವನ್ನೂ ರಂಜಿಸುವಂತೆ ಮಾಡುವ ತಾಯಿ ಬೇರೇ ವಾಗ್ದೇವಿಯು. ಈ ಸಪ್ತಾಂಗಗಳನ್ನು ಈ ಕಾವ್ಯದಲ್ಲಿ ಹುಡುಕಿ ಹಿಡಿದು ತಿಳಿಸಲು ಇಲ್ಲಿ ಸ್ವಲ್ಪ ಯತ್ನಿಸಲಾಗಿದೆ

## ಕತೆ ಗೆಲ್

ಕಾವ್ಯವನ್ನು ವೃಕ್ಷವೆಂದ ಮೇಲೆ, ಆ ವೃಕ್ಷದಲ್ಲಿ ದೃಶ್ಯಾಂಗಗಳಾದ ಹೂ, ಹಣ್ಣು, ಎಲೆ, ಆಶ್ರಯಿಸುವ ಹಕ್ಕಿಗಳು, ತುಂಬಿಗಳು ಮುಂತಾದುವನ್ನು ಹೊತ್ತಿರುವ ಭಾಗವೇ ಗೆಲ್ಲಷ್ಟೆ. ಆದುದರಿಂದ ಕಥಾವಸ್ತುವೇ ಗೆಲ್ಲೆನಿಸುವುದು. ಗೆಲ್ಲು ಎಂದ ಮಾತ್ರಕ್ಕೆ ಕಾವ್ಯವೃಕ್ಷಕ್ಕೆ ಒಂದೇ ಗೆಲ್ಲೆಂದು ಯಾರೂ ಭಾವಿಸಬಾರದು. ಹಲವಾರು ದೊಡ್ಡ ಸಣ್ಣ ಗೆಲ್ಲುಗಳನ್ನೇ ಒಟ್ಟಾಗಿ ಇಲ್ಲಿ ಗೆಲ್ಲೆಂದಿರುವುದು. ಹಾಗೆಯೇ ಕಥಾವಸ್ತು ಒಂದು ವ್ಯಕ್ತಿಯಿಂದ ಮುಂಬರಿಯದು. ಹಲವಾರು ಪಾತ್ರಧಾರಿಗಳ ವೈಯಕ್ತಿಕ ಹಾಗೂ ಸಾಮೂಹಿಕ ಕಥೆಗಳು ಕೂಡಿಯೇ ಅದೊಂದು ಕಥಾವಸ್ತುವಾಗುವುದು. ಕಥಾವಸ್ತುವಿನಲ್ಲಿ ಬೇರೆ ಬೇರೆ ಪಾತ್ರಗಳಿದ್ದು, ಅವರು ತಂತಮ್ಮ ನಡೆನುಡಿಗಳಿಂದ ವಿವಿಧ ವಸ್ತು-ಘಟನೆಗಳಿಗೆ ಕಾರಣರಾಗುವರು. ಹೀಗೆ ಪಾತ್ರಗಳು ಮತ್ತು ಘಟನೆಗಳು ಇದ್ದಷ್ಟೂ ಕಾವ್ಯವೃಕ್ಷವು ವಿಪುಲವೂ ವಿಶಾಲವೂ ಮನೋಜ್ಞವೂ ಜೀವಿಗಳಿಗೆ ಆಶ್ರಯವೂ ಆಗಿ ರಂಜಿಸುವುದು. ಪ್ರಕೃತ, ಈ ಕಾವ್ಯದ ಮುಖ್ಯ ಪಾತ್ರಗಳಾವುವು? ಆ ಪಾತ್ರಗಳು ಕಾವ್ಯವೃಕ್ಷದ ವಿವಿಧ ಶಾಖೆಗಳಾಗಿ ಹೇಗೆ ವಿವಿಧ ಘಟನೆಗಳಾಗಿವೆಯೆಂಬುದನ್ನು ತಿಳಿಯಲು ಯತ್ನಿಸುವ. ಈ ಕಾವ್ಯದಲ್ಲಿ ಶ್ರೀಕೃಷ್ಣ, ಅರ್ಜುನ; ಗಯ, ನಾರದ, ಅಕ್ರೂರ, ಇತರ ಪಾಂಡವರು, ಕೌರವ, ಕರ್ಣ, ಅಶ್ವತ್ಥಾಮ, ಭೀಷ್ಮ, ಬಲರಾಮ, ದುಶ್ಶಾಸನ, ಸಿಂಹ, ವಿಕರ್ಣ, ಕವಿ—ಮುಂತಾದವರಲ್ಲದೆ ಶಿವನು, ಪಾರ್ವತಿ, ಗಣಪತಿ, ಯೋಗಿವರ್ಯರು—ಮುಂತಾದವರು ಕಥಾವ್ಯಕ್ತಿಗಳಾಗಿದ್ದಾರೆ.

## ಪಾತ್ರಗಳ ಸ್ವಭಾವ

ಈ ಕಾವ್ಯದಲ್ಲಿ ಕಥಾನಾಯಕನಾರೆಂಬುದು ಸ್ವಲ್ಪ ತೊಡಕಿನ ಕೆಲಸ. ಧೀರೋದಾತ್ತಗುಣವು ಕಾವ್ಯನಾಯಕನ ಲಕ್ಷಣವಾದರೆ, ಆ ಗುಣವು ಶ್ರೀಕೃಷ್ಣ-ಅರ್ಜುನ-ಎಂಬಿಬ್ಬರಲ್ಲಿಯೂ ಮೂಡಿ ನಿಂತಿದೆ. ಕೃಷ್ಣ-ಅರ್ಜುನರ ಆರ್ಯಚರ್ಯೆಯ ಒಂದಂಶವನ್ನು ಕಾವ್ಯಕ್ಕೆ ವಸ್ತುವಾಗಿ ತೆಗೆದುಕೊಂಡಿದೆಯೆಂದು ಈ ಕಾವ್ಯದಲ್ಲಿ ಹೇಳಿರುವುದರಿಂದ ಅವರಿರ್ವರೂ ನಾಯಕರೇ ಆಗುವರು. ಕೃಷ್ಣಾರ್ಜುನರ ಯುದ್ಧಾರಂಭದ ಪದ್ಯ ಹೀಗಿದೆ—

ಒರ್ವನುದಾತ್ತಗುಣಂ ತಾ
ನೊರ್ವಂ ಸತ್ವಾತಿಶಯನೆ ಬಾಂಧವರಿರ್ವರ್ ॥ (೭-೨)

ಇದರಿಂದ ಇಬ್ಬರೂ ನಾಯಕರಾಗುವರು. ಪರಸ್ಪರವಾಗಿ ಕಾದಾಡಿದುದರಿಂದ ಪ್ರತಿನಾಯಕರೂ ಆಗಬಹುದು. ಅಂತು ಸನ್ನಿವೇಶದ ಪ್ರಭಾವದಿಂದ ಅವರೊಳಗೆ ಯುದ್ಧವೊದಗಿತಲ್ಲದೆ ಈ ಕಾದಾಟಕ್ಕೆ ಬೇರೆ ಅರ್ಥ ಕಾಣುವುದಿಲ್ಲ. ಈ ಯುದ್ಧಕ್ಕೆ ಕಾರಣನು ಖೇಚರನಾದ ಗಯನು. ಪ್ರೇರಕನು ನಾರದನು—ಪ್ರೇರಕನು ಮಾತ್ರವಲ್ಲ, ಈ ಕಾದಾಟಕ್ಕೆ ಉತ್ಕಟತೆಯನ್ನುಂಟುಮಾಡುವುದಕ್ಕಾಗಿ ಕೌರವರನ್ನೂ ಗಂಟಿಕ್ಕಿದವನು ಅವನೇ. ಅಕ್ರೂರನ ಸಂಧಿಪ್ರಸ್ತಾಪವೆಂಬುದು ಶ್ರೀಕೃಷ್ಣನ ರಾಜನೀತಿಯ ನ್ಯಾಯದೃಷ್ಟಿಯ ಪ್ರದರ್ಶನ ಮಾತ್ರ. ಶ್ರೀಕೃಷ್ಣನು ಗಯನ ಮೇಲೆ ರೇಗಿ, ಆತನನ್ನು ಎಂಟನೆಯ ದಿನದಲ್ಲಿ ಕೊಂದುಬಿಡುವೆನೆಂದು ಪೂಣ್ದುದರಿಂದ ಗಯನ ಗರ್ವಭಂಗವಾಯಿತು. ಗಯನಿಗೆ ನಾರದನಿಂದ ಮಾರ್ಗದರ್ಶನ—ಅದರಿಂದ ಅರ್ಜುನನ ಅಭಯಪ್ರಧಾನ—ಅದರಿಂದಲೇ ಕೃಷ್ಣಾರ್ಜುನರ ಕಾಳಗ—ಈ ಕಾಳಗದಿಂದಲೇ ಸತ್ವಾಲೋಕನ. ಸತ್ವಾಲೋಕನವಾದುದರಿಂದಲೇ ಶಿವನು

ಕಾಣಿಸಿಕೊಂಡು ಕೃಷ್ಣಾರ್ಜುನರಿಗೆ ಉಪದೇಶವಿತ್ತು ಲೋಕಕ್ಕೆ ಕ್ಷೇಮ ವನ್ನು ಬಯಸಿದುದು. ಹೀಗೆ ಒಂದು ಪಾತ್ರವು ಮತ್ತೊಂದಕ್ಕೆ ಕಥಾ ಪೋಷಕವಾಗಿ ಈ ಸತ್ವಾಲೋಕನ ಕಾವ್ಯದ ಕಥೆ ಹೆಣೆದುಕೊಂಡಿದೆ.

## ಕಥೆಯ ಸನ್ನಿವೇಶ-ಘಟನೆ-ಔಚಿತ್ಯಗಳು

ಮಾನವನ ಜೀವನವೆಂಬುದು ಸನ್ನಿವೇಶಕ್ಕೆ ಅನುಗುಣವಾಗಿ ಮಾರ್ಪಡುತ್ತ ಸಾಗುವುದು. ದೇವತೆಗಳದೂ ಇದೇ ರೀತಿಯೆಂದು ನಮಗೆ ಕಥೆ-ಪುರಾಣಗಳು ತಿಳಿಸುತ್ತವೆ—ಅದಿರಲಿ. ಸನ್ನಿವೇಶವು ಪ್ರಬಲವೂ ಪ್ರಭಾವಿಯೂ ಆದಂತೆ ಜೀವನದ ಘಟನೆಗಳು ಹೆಚ್ಚು ಹೆಚ್ಚು ಪ್ರಭಾವೋತ್ಪಾದಕವಾಗಿ ಸಾಗುತ್ತವೆ. ಅಂತಹ ಪ್ರಭಾವೀ ಜೀವನದ ಮಾರ್ಮಿಕ ಶಬ್ದಚಿತ್ರವು ಕಾವ್ಯವಾಗುವುದು. ಹೀಗೆ ಕಾವ್ಯವು ಜೀವನದ ಪ್ರತಿಬಿಂಬವೆನಿಸುವುದು. ಈ ಕಾವ್ಯದ ಕಥೆಯಲ್ಲಿ ಬರುವ ಮುಖ್ಯ ಘಟನೆಗಳು ಯಾವ ಯಾವ ಸನ್ನಿವೇಶಗಳಿಂದ ಸ್ಫುಟ ವಾಗಿವೆಯೆಂಬುದನ್ನು ಇಲ್ಲಿ ತಿಳಿಯುವ.

ಶ್ರೀಕೃಷ್ಣನು ಗಯನನ್ನು ಕೊಲ್ಲಲ್ಲು ಶಪಥ ಮಾಡಿದುದು ಸತ್ವಾ ಲೋಕನದ ಕಥಾಬೀಜವೆನ್ನಬಹುದು. ಯಾವ ಸನ್ನಿವೇಶವು ಆತ ನನ್ನು ಅಷ್ಟುಮಟ್ಟಿಗೆ ಕೆರಳಿಸಿತು—ಎಂಬುದನ್ನು ಪರಿಶೀಲಿಸಬೇಕು.

ವಿನೋದಶೀಲನೂ ಲೋಕಕಲ್ಯಾಣಕಾರಿಯೂ ಆದ ಶ್ರೀ ಕೃಷ್ಣನು ಉದ್ಯಾನ ವಿಹಾರವನ್ನು ಕೈಗೊಂಡುದು ಸನ್ನಿವೇಶದ ಪ್ರೇರಣೆಯಿಂದಲೇ ಆಗಿದೆ.

ಶ್ರೀಕೃಷ್ಣನು ದ್ವಾರಕೆಯಲ್ಲಿದ್ದಾಗ ಒಮ್ಮೆ ವಸಂತಮಾಸವು ತಲೆ ದೋರಿತು. ವಸಂತವೆಂದರೆ ಮನುಷ್ಯರಿಗೆ ಮಾತ್ರವಲ್ಲ, ಪ್ರಾಣಿಗ ಳಿಗೂ ಸಸ್ಯಗಳಿಗೂ ಬಾಳಿನಲ್ಲಿ ಬೆಳಕನ್ನು ತಂದು ಇಷ್ಟಾರ್ಥವನ್ನು ಈಡೇ ರಿಸಿ ಕೊಡುವಂಥಾದ್ದು. ಅಂತಹ ಕಾಲದಲ್ಲಿ ಒಂದು ದಿನ ಶ್ರೀಕೃಷ್ಣನು

ಹೆಂಡಿರ ತಂಡದ ಸಭೆಯೊಳಿದ್ದನು—ಅಲ್ಲಿ ಸಾಹಿತ್ಯಯುತವಾದ ಸಂಗೀತ ನರ್ತನಾದಿಗಳು ನಡೆದುವು. ಆ ಹೆಂಡಿರಲ್ಲ ಎಲ್ಲರ ಮುಖಿಯಾಗಿ ಓರ್ವಳು ವನಾಟನೇಚ್ಛೆಯನ್ನೂ ಜಲಕೇಳಿಯ ಕಾಂಕ್ಷೆಯನ್ನೂ ತಿಳಿಸಿದಳು. ಆ ಮಾತೂ ಕೇಳತಕ್ಕುದೇ.

ಪೆಂಡಿರೆನಂತರಿಂ ಗೃಹಪೆ ಸಟ್ಟುಗವಾಂಪುದು ಮಕ್ಕಳಿಂ ಸೊಗಂ
ಗೊಂಡುಡೆ ಸಾಂಕಿ ಸಂಪದೆವನುಂಬುದು ಕೇಳ್ವುದು ಗಾನಮಂ
ಮನಂ |
ಗೊಂಡಿರಲೋದುಮಾ ಸಹಜ-ಸುಂದರ-ಬಂಧುರ-
ನಂದನಂಗಳೊಳ್
ಕಂಡೆಡೆಗೀಗಳೆಯ್ದಿ ನಲಿದುಂಡ ಸುಖೋದಯಕೊಂದು
ಸಾಟಿಯೇ || (೨-೩೨)

ಕಲಿಸದೆ ಬಂದ ಕೌಶಲದೆ ಪಾಡುವ ಕೋಗಿಲೆ, ಮಾತನಾಡುವಾ
ನಲವಿನ ಬಾಸೆವಕ್ಕಿ, ಪರಿವಂಚೆ, ಮೃಗಾಳಿ, ಮನೋನುರಾಗದಿಂ
ದುಲಿವೆಳದುಂಬಿ, ಚೆಲ್ವೆಸೆವ ಪೂಮರವಳ್ಳಿ, ಕೊಳಂಗಳೆಂಬ ನೆ
ಲ್ಲೆಲಸಿರಿ ನೋಡದೀ ಮನೆಯ ಮೂರ್ತಿವ್ರೊಲೆನ್ಕುದು ಬಾಳ್ಕೆ
ಬಾಳ್ಕೆಯೇ || (೨-೩೫)

ಶ್ರೀಕೃಷ್ಣನ ವನಿತೆಯರೆಂದರೆ, ಮನೆಗೆಲಸನ್ನು ಮಾತ್ರ ಮಾಡು ತಿದ್ದು, ಮಕ್ಕಳನ್ನು ಪಡೆದು, ಸಾಕಿ, ಸಂಪತ್ತನ್ನು ಅನುಭವಿಸುವ ವಿಲಾಸತೆಯ ಯಂತ್ರೋಪಕರಣಗಳಂತೆ ಇದ್ದಿಲ್ಲ. ಬುದ್ಧಿ ಮನಸ್ಸು ಗಳು ಅವರಲ್ಲಿ ಕೆಲಸ ಮಾಡುತ್ತಿದ್ದುವು. ಸಂಗೀತ-ಸಾಹಿತ್ಯಾದಿ ಕಲೆ ಗಳಲ್ಲೂ ನುರಿತವರವರು. ಪ್ರಕೃತಿ ಸೌಂದರ್ಯದ ಅವಲೋಕನ ದಲ್ಲಿಯೂ ಅವರು ಆನಂದವನ್ನು ಅನುಭವಿಸಬಲ್ಲರು. ಅಂತಹ ಅವರ ಸದಿಚ್ಛೆಯನ್ನು ಈಡೇರಿಸದ ಅರಸಿಕನು ಶ್ರೀ ಕೃಷ್ಣನೇ? ಅವನನ್ನು ಪ್ರೇರಿಸುವ ಸನ್ನಿವೇಶಗಳು ಇನ್ನೂ ಇದ್ದುವು.

ಆಗಲೇ ಉದ್ಯಾನದತ್ತಲಿಂದ ಪುಷ್ಪಸುಗಂಧಮಯವಾದ ವಾಯು ತನ್ನ ಕಡೆಗೆ ಬೀಸಿದುದು, ತಿಂಬಾಸೆಯಾದಾಗ ತಿಂಡಿಯ ಪರಿಮಳ ಮೂಗಿಗೆ ಬಡಿತಂತಾಗಿರಬೇಕು. ಸಾಲದುದಕ್ಕೆ ತಿಂಡಿಯಿದೆಯೆಂದು ಕರೆವಂತೆ ಕೋಗಿಲೆಯ ಅವ್ಯಕ್ತ ಮಧುರ ಧ್ವನಿ ಆತನಿಗೆ ಕೇಳಿಸಿತು. ಆ ಮರುಕ್ಷಣವೇ ವನಪಾಲಕನು ಬಂದು ಕಾಣಿಕೆಗಳನ್ನರ್ಪಿಸಿ ಬಹಿರ್ನಂದನವನ್ನು ನೋಡಲು ಬರಬೇಕೆಂದು ಬಿನ್ನಯಿಸಿದನು. ಈ ಉತ್ತೇಜಕ ಸನ್ನಿವೇಶಗಳಿಂದ ಆ ಅಷ್ಟಮಾಂಗನೆಯರಿಗಂತೂ ವನವಿಹಾರದ ಅಹಮಹಮಿಕೆ ಮತ್ತೂ ಹೆಚ್ಚಿತು. ಇನ್ನೇನು ? ಶ್ರೀಕೃಷ್ಣನು ವನವಿಹಾರಕ್ಕಾಗಿ ಹೊರಟೇ ಬಿಟ್ಟನು.

ಶ್ರೀಕೃಷ್ಣನು ಗಯನ ಮೇಲೆ ಕೆರಳಿದ ಸನ್ನಿವೇಶ ಮತ್ತಿನದು. ವನವಿಹಾರ, ಪುಷ್ಪಾಪಚಯ, ಜಲಕೇಳಿಗಳನ್ನು ಮುಗಿಸಿ, ಆ ಹೆಂಗುಸರು ಶ್ರೀಕೃಷ್ಣನಿದ್ದ ಕುಂಜಗೃಹಕ್ಕೆ ಬಂದು ವಿಶ್ರಮಿಸಿದ್ದ ಸಮಯವದು. ಸಂತೋಷ, ತೃಪ್ತಿ, ಪ್ರೀತಿ, ವಿನೋದ, ಶಾಂತಿಗಳು ಆ ಸುಗಂಧ, ಸೌಂದರ್ಯ, ಮಂದಮಾರುತಮಯವಾದ ಪ್ರಶಾಂತ ವಾತಾವರಣದಲ್ಲಿ ಭವ್ಯತಾಂಡವವೆಸಗುತ್ತಿದ್ದ ಸಮಯವದು. ಅದನ್ನೆಲ್ಲ ಭಂಗಗೊಳಿಸುವಂತಹ ಖೇಚರನ ಉದ್ವರ್ತನೆ ಆಗಲೇ ನಡೆಯಬೇಕೆ? ನಡೆದೇ ನಡೆಯಿತು. ಕುಬೇರ ಪುತ್ರನಾದ ಗಯನಿಗೆ ದ್ವಾರಕೆಯಲ್ಲಿ ತನ್ನ ಅಶ್ವಾರೋಹ ಸಾಮರ್ಥ್ಯದ ಪ್ರದರ್ಶನೇಚ್ಛೆ! ಭೂಲೋಕದವರು ತನ್ನನ್ನು ಬೆರಗಿನಿಂದ ನೋಡಬಹುದೆಂತಲೂ ಹೊಗಳಬಹುದೆಂತಲೂ ಅವನ ನಿರೀಕ್ಷೆಯಿದ್ದಿರಬೇಕು. ಭೂಲೋಕಕ್ಕೆ ಈಗ ಹೋಗುವುದು ತಕ್ಕುದಲ್ಲವೆಂದು ಆತನ ಗುರುಜನರು ಹೇಳಿದರೂ ಅವನು ಕೇಳನು. ಇದಕ್ಕೆ ಕಾರಣ, ಮದ. ಮದಕ್ಕೆ ಕಾರಣ—

ಸಂಪದಮುಂಟು ತನ್ನ ಬಗೆಗೊಪ್ಪಿದ ಪೆಂಡಿರ ಮೇಳಮುಂಟು ತಾ
ತಂಪರಮೇಶ ಮಿತ್ರನೆನಿಪೊಪ್ಪವ ಪೆಮ್ಮೆಯುಮುಂಟು ಸರ್ವರಿಂ

ದಂಪದಪೊಂದಿದೊಂದು ಕುಲಮುಂ ಚಲಮುಂ ಬಲಮುಂ
ನೆಗಳ್ತೆಯುಂ
ಟಿಂಪೆರಶೇಕೆ ಜವ್ವನಮಿರಲ್ ಮದಮಿಲ್ಲದೆ ಬಾಳ್ವವೆತ್ತರಾರ್
(೩-೧೨)

ಇಂತಹ ಸನ್ನಿವೇಶದಲ್ಲಿದ್ದುದರಿಂದಲೇ ಮದವು ಆತನಲ್ಲಿ ಪ್ರಭುತ್ವವನ್ನು ಮಾಡಿದುದು, ಸರಿ, ಆತನೇರಿದ ಕುದುರೆ ಪಟ್ಟಣದ ವೇಗ-ನಿಯಮಗಳನ್ನು ಮೀರಿದುದರಿಂದ, ಅದರ ಕಾಲ ಗೊರಸು ಹಲವರಿಗೆ ಮೃತ್ಯುವಾಯಿತು. ಗೊರಸಿನ ತುಳಿತದಿಂದೆದ್ದ ಧೂಳು ಮುಸುಕಿ ಜನರಿಗೆ ಉಸಿರಾಡುವುದೇ ಕಷ್ಟವಾಯಿತು. ನಿಲ್ ನಿಲ್ಲೆಂದು ಎಣ್ಣೆದೇರ್ಗೆ (ಸರ್ವೀಸ್ ಬಸ್) ಪಯಣಿಗರಂತೆ ಯಾರು ಕೈಯೆತ್ತಿದರೂ ಒಳಗೆ ಎಡೆಯಿಲ್ಲದ ಬಸ್ಸಿನಂತೆ ಸಾಗಿತು ಗಯನ ಹಯ. ಪಟ್ಟಣಿಗರು ಶ್ರೀಕೃಷ್ಣನಿಗೆ ಮೊರೆಯಿಟ್ಟರು. ಶ್ರೀ ಕೃಷ್ಣನಿಗೂ ಆತನ ಮಡದಿಯರಿಗೂ ದೂಳು ತಗಲಿರಬೇಕು. ಈ ರೀತಿಯಾದರೆ ಲೋಕಕ್ಕೆ ಅಶಾಂತಿಯೂ ಪ್ರಜೆಗಳಿಗೆ ಕಷ್ಟವೂ ಆಗುವುದಲ್ಲದೆ, ಸುಮ್ಮನಿದ್ದಲ್ಲಿ ಶ್ರೀಕೃಷ್ಣನಿಗೆ ಪರಾಭವವಾದಂತೆಯೇ ಸರಿ. ಅದಲ್ಲದೆ 'ತನ್ನ ಮನಕ್ಕೆ ಮೆಚ್ಚಿನಾ ಸುದತಿಯರ್ಗಂ* ವಿರಾಗಕರಂ' ಎಂದು ಶ್ರೀ ಕೃಷ್ಣನು ತಿಳಿದು ಉದಗ್ರ-ರೌದ್ರವನ್ನು ತಾಳಿದನು. ಮತ್ತು ಎಂಟನೆಯ ದಿನದಲ್ಲಿ ಕೊಂದು ಬಿಡುವೆನೆಂದು ಸೂರುಳಿಟ್ಟನು. ಹೀಗೆ ಶ್ರೀಕೃಷ್ಣನು ಗಯನನ್ನು ವಧಿಸಲು ಲೋಕಕಲ್ಯಾಣದೃಷ್ಟಿ, ಪ್ರಜಾಹಿತಕಾಂಕ್ಷೆ ಮತ್ತು ತನ್ನ ಸ್ಥಾನ-ಮಾನ-ಗೌರವಗಳ ರಕ್ಷಣೇಚ್ಛೆ – ಎಂಬ ಕಾರಣಗಳು ಮುಪ್ಪುರಿಗೂಡಿದುದು ಸಹಜವೆನಿಸುತ್ತದೆ.

ಈ ಕಥಾಬೀಜದ ಮೊಳಕೆಗೂ ಬೆಳವಣಿಗೆಗೂ ತಕ್ಕುದಾದ ಮುಂದಿನ ಸನ್ನಿವೇಶವೆಂದರೆ, ಗಯನನ್ನು ನಾರದನು ತಡೆದು ಶ್ರೀ ಕೃಷ್ಣನ ಪ್ರತಿಜ್ಞೆಯನ್ನು ತಿಳಿಸಿದುದು, ಆತನಲ್ಲೇ ಕ್ಷಮೆ ಬೇಡಲು

ಹೇಳಿದುದು, ದೇವನನ್ನು ನಂಬಿ ಕಾರ್ಯವನ್ನು ಸಾಧಿಸಲು ತಿಳಿಸಿದುದು ಮತ್ತು ಆದರಂತೆ ಗಯನು ಶ್ರೀಕೃಷ್ಣನಿಂದ 'ಕಾವರಂ ಆರಸಿ ಮರೆವುಗು' ಎಂಬ ಮಾತನ್ನು ಪಡೆದುದು. ಕಾವವನೇ ಕೊಲ್ವೆನೆಂದ ಮೇಲೆ ಇನ್ನೊಬ್ಬ ಕಾವವನು ಅರ್ಜುನನಿದ್ದಾನೆಂದು ಗಯನಿಗೇನು ಗೊತ್ತು?

ವಾಣೀನಂದನ-ಧೈರ್ಯವಾಗುದಕಮಾ ಚಿಂತಾಗ್ನಿಯಂ
ತೊಯ್ದೊಡಂ
ವಾಣೀನಾಥ ಪಿತುರ್ವಚಸ್ತತಿ ಪುನಃ ಪ್ರಾಜ್ವಲ್ಯಮಂ ಮಾಡೆ ನಿ ||
ರ್ವಾಣಾಲಾತ-ಸಶೇಷವಹ್ನಿಯನಿಲಾಘಾತಕ್ಕೆ ಪಕ್ಕಾದವೋಲ್
ಪ್ರಾಣ-ತ್ರಾಣ-ಸಮರ್ಥತಾಹತಿಯನೇ ತಾಳ್ದಿರ್ದನಂತಾ ಗಯಂ
(೩-೨೮)

ಗಯನ ಚಿಂತಾಗ್ನಿ ನಾರದನ ಧೈರ್ಯವಾಕ್ಕೆಂಬ ನೀರಿನಿಂದ ತೋಳೆಯಲ್ಪಟ್ಟಿದ್ದರೂ ಎಲ್ಲೋ ಒಂದೆಡೆ ಕಿಡಿ ನಂದದೆ ಉಳಿದಿರಬೇಕು. ಆ ಕಿಡಿಯೀಗ ಶ್ರೀಕೃಷ್ಣನ ಮಾತುಗಳೆಂಬ ಗಾಳಿಹೊಡೆತಕ್ಕೆ ಸಿಕ್ಕಿ ಪುನಃ ಉರಿದುದರಿಂದ ಇನ್ನು ಜೀವವನ್ನುಳಿಸುವ ದಾರಿಗಾಣದೆ ಗಯನಿದ್ದನು. ಆದರೂ ನಾರದನ ಮಾತನ್ನು ಬೆಲೆಗಟ್ಟಿ ಕೈಲಾಸದೆಡೆಗೆ ಬರುತ್ತಾ ತನ್ನ ಸಾಧನೆಗೆ ಪ್ರಕೃತಿಮಾತೆಯು ಸಮರ್ಥನೆಯೋ ಎಂಬಂತೆ ಕೋಳಿ ಮರಿ ಮತ್ತು ಹೋರಿಕರು-ಇವೆರಡು ತಮ್ಮ ವೈರಿಗಳಿಂದ ಪಾರಾದುದನ್ನು ಕಂಡನು. ಹಿಂದೆ ಅಶ್ವಾರೋಹಿಯಾಗಿದ್ದ ಗಯನೇ ಬೇರೆ, ಪಶ್ಚಾತ್ತಾಪ ದಗ್ಧದುರ್ವೃತ್ತನಾದ ಈಗಿನ ಗಯನೇ ಬೇರೆಯೆಂಬಷ್ಟು ಈಗ ಅವನು ಮಾರ್ಪಟ್ಟಿದ್ದನು. ಋಷ್ಯಾಶ್ರಮಗಳನ್ನೂ ತಪೋನಿಷ್ಠರನ್ನೂ ಕಾಣುತ್ತ, ಅವರಿಂದ ತಕ್ಕ ಉಪದೇಶವನ್ನು ಪಡೆಯುವನು. ಶಿವನು ಅವನಿಗೆ ಕಾಣಿಸಿ ಎಂದು ದಿಷ್ಟೀ—

ಏವಂ ಮಾಣ್ ದ್ವೈತಮೆಂಬಾಟವಿಯೊಳಿಸೆದಪಂ ಸೋದರೋಪೇತ
ಪಾರ್ಥಂ
ಕಾವಂ ಮದ್ಭಕ್ತನಾತಂ ತಪಿತಜನಶರಣ್ಯಂ ಮಹಾಸತ್ವವಂತಂ
ಭೂವಿಸ್ತಾರಪ್ರತೀತ್ಯರ್ಚಿತನಭಯವನಿನ್ನಾತನಿಂ ಪೊಂದು ಗರ್ವೋ
ದ್ಭಾವಂ ತ್ವತ್‌ಪಾಪದಿಂದೆನ್ನೆಯೆ ಬಕತಿಯೊಳಿ ಪೋ

ಪಡಲ್ವಟ್ಟುದೀಗಳ್ (೩-೬೫)

ರುದ್ರಾಣಿಯೂ ಇದನ್ನೇ ಅನುಮೋದಿಸಿದುದರಿಂದಲೂ ಎಡ ಗೇಡಿ 'ಎಡರೆಡೆಯೊಳಡಸದಿರ್ಕೆನು' ಎಂದು ಹರಿಸಿದುದರಿಂದಲೂ ಗಯನು ನೇರಾಗಿ ಬಂದು ಅರ್ಜುನನನ್ನು ಎಕ್ಕಟಿಯಲ್ಲಿ ಕಂಡು—

ಗಾಳಿಯ ಬಿರುಮಳೆಗೆರಗಿದ
ಬಾಳೆಯವೋಲ್ ದೊಪ್ಪನಡಿಗೆಡೆದು ಕಂಬನಿಗಳ್ ||
ಬೀಳುತ್ತಿರೆ ಗಯನಂ ನರ
ನೇಳೇಳೇನಾದುದೆಂದು ಬೆಸಗೊಳುತಿರ್ದಂ || (೪-೪೩)

ಅರ್ಜುನನು ಬೆಸಗೊಂಡುದಕ್ಕೆ ಗಯನ ಮಾತಿಷ್ಟೆ. "ಆಂ ಖೇಚರ ನಪ್ಪಗೆಯುಂ, ಎನ್ನನೆನ್ನವೈರಿ ಕೊಲಲ್ ಸೂರುಳಿಟ್ಟೊಡೆ, ಕಾವರ ನಾರಯುತೆ ಭಗವದ್ಭವಾನೀವಲ್ಲಭನಂ ಕಂಡೊಡೆ-ಆತಂ ನಿನ್ನ ಕುರುಪುವೇಳ್ದು ಬಳಿಕೆನ್ನ ನಿಲ್ಲಿಗೆ ಕಳುಪಿದಂ, ಅದರಿಂ ಶರಣನಪುವಂ ಕಾಯುವೇಳ್ಪುದು". ಈ ಮಾತು ಕೇಳಿ ಪಾರ್ಥನಿಗೆ ಹುರುಪು ಏರಿರ ಬೇಕು. ಆಶ್ರಿತ ವಾತ್ಸಲ್ಯ, ಶೌರ್ಯ, ಧೈರ್ಯ, ಕರುಣೆಗಳೊಂದಿಗೆ ಶಿವನೇ ಈತನನ್ನು ತನ್ನಲ್ಲಿಗೆ ಅಟ್ಟಿದನೆಂಬುದರಿಂದಾದ ಗೌರವವು ಅವನ ಅಂತಸ್ಸತ್ವವನ್ನು ಕೆರಳಿಸಿರಬೇಕು. ಆದುದರಿಂದಲೇ ಅವನು ಹಿಂದೆ ಮುಂದೆ ನೋಡದೆ ಘೋರ ಪ್ರತಿಜ್ಞೆ ಮಾಡಿದನೆಂದು ಸಹಜವಾಗಿ ತೋರವುದು. ಶರಣಾಗತನನ್ನು ಕಾಯಲಿಕ್ಕಾಗದ ಪಕ್ಷ ದಲ್ಲಿ ಅಗ್ನಿಕುಂಡವನ್ನು ಪ್ರವೇಶಿಸುವೆನೆಂದು ನುಡಿದೇನೋ ಆಯಿತು.

ಆದರೆ ತನ್ನ ವೈರಿ ಶ್ರೀಕೃಷ್ಣನೆಂದು ತಿಳಿದಾಗ ಅವನಿಗಾದ ಸಂಕಟವನ್ನು ಏನು ಹೇಳಲಿ! ಅದನ್ನು ತಿಳಿದ ಆತನ ಸಹೋದರರಿಗೂ ದುಃಖವೇ ಆಯಿತು. ಆದರೇನು? ಈ ದುಃಖದ ಸನ್ನಿವೇಶವು ಕರ್ತವ್ಯಲೋಪಕ್ಕೆ ಕಾರಣವಾಗಲಿಲ್ಲ; ದೃಢನಿಶ್ಚಯದ ಜಲ್ಲಿರಸ್ತೆಗೆ ಐಕಮತ್ಯದ ತಾರಾಯಿತು. ಮುಂದೆ ಸಂಧಿ ಪ್ರಸ್ತಾಪಕ್ಕಾಗಿ ಶ್ರೀಕೃಷ್ಣನಟ್ಟಿದ ಅಕ್ರೂರನ ನಯದ ಭಯದ ನುಡಿಗೂ ಅರ್ಜುನನು ತನ್ನ ನಿರ್ಣಯವನ್ನು ಬದಲಾಯಿಸಲಿಲ್ಲ. ಅರ್ಜುನನ ಮಾತಿದು —

> ಅರವಕ್ಕಳ್ಗರನೆಂದು ಬಂದು ಮರೆವೊಕ್ಕಾತಂಗೆ ಧೈರ್ಯಂಗುಡಲ್
> ನೆರೆದೆಂ ನಲ್ಪಗೆಯಾತನಂ ಪಗೆಯಲಲ್ಲಂ ದೈವಮೊತ್ತೈಸಲಾ ||
> ಹರಿಯುಂ ಕಾದುವೆಸಿಂಪ್ರಮುಖ್ಯರೊಳಮಾಂ ಮಾರಾಂಪೆನಾ
> ಪಾರ್ವತೀ
> ಶ್ವರನಂ ತಳ್ತಿರಿವೆಂ ದಲೆನ್ನ ಶಪಥಂ ಬೀಯಲ್
> ಸೊಗಂ ಬಾಳ್ವಿನೇ || (೪-೪೩)

ಇನ್ನು ಹಿಂದು ಮುಂದು ನೋಡದೆ ಆ ಕೃಷ್ಣನು ತನ್ನಲ್ಲಿ ಕಾದಿದ ನಾದರೆ " ಸಕ್ಕರೆ ಬೆನೆಯಿಂದೆ ಮಣಲನುಂಬಂತಕ್ಕುಂ " ಎನ್ನುವನು. ಹೀಗೆ ಪಾರ್ಥನ ಪೌರುಷದಿಂದ ಸಂಧಿಯು ಕೀಲು ಮುರಿದುದು.

ಕಥೆಯಲ್ಲಿ ಬರುವ ನಾಲ್ಕನೆಯ ಸನ್ನಿವೇಶವು ನಾರದನ ತಂತ್ರವೆಂಬುದು. ಗಯನ ನೆವದಿಂದ ಪಾಂಡವರಿಗೂ ಯಾದವರಿಗೂ ಸಮರವು ಸನ್ನಿಹಿತವಾಯಿತು, ನಿಜ. ಒಂದೆಡೆ ಯಾದವರ ಅಸಂಖ್ಯ ಬಲ, ಇನ್ನೊಂದೆಡೆ ಐದೇ ಮಂದಿ! - ಇದೆಂತಹ ಯುದ್ಧ ? ಪಾಂಡ ವರಿಗೆ ಸೈನ್ಯ ಬೇಡವೆ ? ಅವರಿಗೆ ಕೌರವರ ಸೈನ್ಯವನ್ನು ತಂದೊದಗಿಸ ಬೇಕು. ಕೆಟ್ಟ ಕೌರವನಿಗೂ ಸರಿಯಾಗಿ ಪೆಟ್ಟು ಸಿಗಬೇಕು - ಈ ಗುರಿಯನ್ನು ಸಾಧಿಸುವುದೇ ನಾರದನ ತಂತ್ರದ ಉದ್ದೇಶ. ನಾರದನು ಕೌರವನಲ್ಲಿಗಯ್ದುವನು. ಆಗಿನ ಅವನ ವರ್ಣನೆಯಿದು —

ತೊಳಚಿಯ ರುದ್ರಾಕ್ಷಿಗಳಾ
ವಳಿಗಳ್ ಗಳದಲ್ಲಿ ತಾಂಟೆ ಗಂಟಿಕ್ಕಿ ಜನಾ ||
ವಳಿಗೆ ಕಿಸುರನಳ್ಕರ್ತರ್ಗಂ
ವಿಳಸಿತ ಮತಿಯೆಂದು ಮುನಿಯನೆಂಬವೊಲೆಸೆಗುಂ || (೫-೩)

ನೋಡುವಾಗಲೇ ಕಲಹಪ್ರಿಯನಂತೆ (ಕಿಸುರನಳ್ಕರ್ತರ್ಗಂ) ನಾರದನು ತೋರಿದರೂ, ಕೌರವರ ಸಭೆಯವರಿಗೆ ಈತನು ಕಲಹಪ್ರಿಯನಲ್ಲ, ಸ್ನೇಹಪ್ರಿಯನೆಂದು ತೋರುವಂತೆ ನಾರದನು ಅಲ್ಲಿ ವರ್ತಿಸಿದನು. ಪಾಂಡವರಿಗೆ ಕೌರವನು ಈ ಸಂದರ್ಭದಲ್ಲಿ ಯುದ್ಧಕ್ಕೆ ಸಹಾಯಕನಾಗುವುದೇ ಉಚಿತವೆಂದು ತಾರ್ಕಿಕವಾಗಿ ನೀತಿಸಮರ್ಥನೆಯಿಂದ ಆತನು ತಿಳಿಸಿಬಿಟ್ಟನು. ನಾರದನು ಹೊರಟೊಡನೆ ಕೌರವನ ಸೇನೆ ಸಿದ್ಧವಾಗ ತೊಡಗಿತು. ಆದರೆ ಆತನಿಗೆ ಅಪಶಕುನವೆಂಬಂತೆ ಆತನ ವೀರರಿಗೆ ಉತ್ಸಾಹವಿರಲಿಲ್ಲ, ಅವರಲ್ಲಿ ಹಲವರು ನಿಜಕ್ಕೂ ಹೇಡಿಗಳಿದ್ದುದರಿಂದ ಉಪಾಯದಿಂದ ತಪ್ಪಿಸಿಕೊಂಡರು ಇದು ಸೈನಿಕರಲ್ಲಾದ ಅನಿಷ್ಟಸೂಚನೆಯಾದರೆ ಮುಖಂಡರಾದ ಕರ್ಣಾಶ್ವತ್ಥಾಮರಲ್ಲಿ ವೈಮನಸ್ಸಿನಿಂದ ಕದನವೇ ನಡೆವಂತಾಯಿತು. ಕಡೆಗೆ ಕೌರವನು ಕರ್ಣಪಕ್ಷಪಾತಿಯಾಗಿ ತನ್ನನ್ನು ವಿರೋಧಿಸಿದುದರಿಂದ ದ್ರೋಣಪುತ್ರನು ಕರ್ಣನ ಮಾತಿನಂತೆ ನಡೆದರೆ, ತನಗಾದ ಅವಜ್ಞೆ ಕೌರವನ ಸೈನ್ಯಕ್ಕೇ ಆಗಲಿ ಎಂದು ನುಡಿದು ತೆರಳಿಯೇಬಿಟ್ಟನು. ಭೀಷ್ಮದ್ರೋಣಾದಿಗಳು ಮುಂದೆ ಬಂದು ಕೌರವನನ್ನು ತಿದ್ದಬೇಕಾಯಿತು. ಇದರಿಂದ ಕರ್ಣನ ಗರ್ವವೂ ಕುಗ್ಗಿತು. ಅವನು ನೆಪಮಾತ್ರಕ್ಕೆ ಕೌರವಸೇನೆಯಲ್ಲಿ ನಿಂತಿರಬೇಕು. ಭೀಷ್ಮದ್ರೋಣಾದಿಗಳಿಗೆ ಕೌರವರು ಪಾಂಡವರನ್ನು ಬೆರೆಯುವುದೇ ಹಿತವಾದುದರಿಂದಲೂ ನಾರದನ ಉಪದೇಶವು ಹಾಗೆಯೇ ಇದ್ದುದರಿಂದಲೇ ಕೌರವನು ಅವರ ಮಾತಿಗೆ ಒಡಂಬಟ್ಟು ಪಾಂಡವರಲ್ಲಿಗೆ ಬಂದುಬಿಟ್ಟನು. ಬಂದರೇನು? ಧರ್ಮರಾಯನಿಗೆ ಮಚ್ಚುಗೆಯೇ ಆಯಿತು.

ಪೊಸತೆಯ್ದಿ ನೆರೆಯೆ ಬಲದೊಡ
ನೆಸಗಿದುದಂ ಮರೆತು ಹಿತಸಹೋದರನೆನೆ ಭಾ ||
ವಿಸುತನುಜರ ಕೂಡಿಯೆ ಮ
ನ್ನಿಸಿದಂ ಗಾಂಧಾರಿಯಣುಗನಂ ಜವನಣುಗಂ || (೬-೧೦)

ಇದು ಅಜಾತಶತ್ರುವಾದ ಧರ್ಮರಾಯನ ಮಹದ್ಗುಣವಷ್ಟೆ.

ಇನ್ನು ಈ ಕತೆಯ ಕೊನೆಯ ಸನ್ನಿವೇಶವೆಂದರೆ, ಶಿವನು ಪ್ರಸನ್ನನಾಗಿ ಮಂಗಳವನ್ನುಂಟುಮಾಡಿದುದು. ಶಿವನು ಧರೆಗೆ ಇಳಿದು ಬರಬೇಕಾಯಿತೆಂದರೆ ಆ ಘಟನೆ ಅಷ್ಟೊಂದು ತೀವ್ರವಾದು ದೆಂದು ತಿಳಿಯಲು ಬೇರೆ ಆಧಾರ ಬೇಡ. ಯಾದವರ ಸೇನೆಯೊಂದೆಡೆ ಅದಕ್ಕೆದುರಾಗಿ ಕೌರವಸೇನೆ. ಯುದ್ಧ ನಡದೇ ಬಿಟ್ಟಿತು. ಸಾಲ ದುದಕ್ಕೆ ವಿತ್ತಾಧೀಶನ ಆಜ್ಞೆಯಿಂದ ಬಂದ ವಿಮಾನ ಸೇನೆಯ ಯುದ್ಧವೂ ಸಾಗಿತು. ದುಶ್ಯಾಸನನಿಗೆ ಯಾದವ ವೀರನಾದ ಸಿಂಹ ನೊಂದಿಗೂ, ಭೀಷ್ಮನಿಗೆ ಬಲರಾಮನೊಂದಿಗೂ ವಿಕರ್ಣನಿಗೆ ಕವಿ ಯೊಂದಿಗೂ ಮಾತಿನ ಮತ್ತು ಕೈದುಗಳ ಪ್ರಯೋಗದ ಭಯಂಕರ ಯುದ್ಧವು ನಡೆಯಿತು. ಈ ಕತೆಯ ಯುದ್ಧ ಭಾಗದ ಚರಮ ದೆಶೆ ಯೆಂದರೆ, ಕೃಷ್ಣಾರ್ಜುನರ ಯುದ್ಧ. ಒಬ್ಬರಿಗೊಬ್ಬರು ಹೊಡೆ ಯುತ್ತಾ ಮೊದಲು ಅರ್ಜುನನು ಬಿದ್ದಾಗ, ಶ್ರೀಕೃಷ್ಣನು ಗಯನ ತಲೆಗಡೆದು ತನ್ನ ಪ್ರತಿಜ್ಞಾಪಾಲನೆಯನ್ನೆಸಗಿದನು. ಆ ಮೇಲೆ ಎದ್ದ ಅರ್ಜುನನು ಕ್ರೋಧೋದ್ರಿಕ್ತನಾಗಿ ಶ್ರೀಕೃಷ್ಣನನ್ನು ಹೊಡೆದು ಬೀಳಿಸಿ ತನ್ನ ಪ್ರತಿಜ್ಞೆಯಂತೆ ಅಗ್ನಿಪ್ರವೇಶಕ್ಕೆ ಸಿದ್ಧತೆಯನ್ನೆಸಗುತ್ತಿ ದ್ದನು. ಈ ವಿಷಮ ಪರಿಸ್ಥಿತಿಯನ್ನು ಸರಿಗೊಳಿಸಬೇಕಾದರೆ ಶಿವನೇ ಆಗಬೇಕು. ಕೃಷ್ಣಾರ್ಜುನರಿಬ್ಬರು ಲೋಕಕ್ಕೆ ಸದರ್ಥವನು ತೋರತಕ್ಕವರು. ಅವರೇ ಹೀಗೆ ಕಾದಾಡಿ ಬಿದ್ದುಕೊಂಡರೆ ಇನ್ನು

ಲೋಕಕಲ್ಯಾಣವಾಗುವುದೆಂತು? ಭೂದೇವಿಯೂ ದೇವತೆಗಳೂ ಅಭವನಿಗೆ ಮೊರೆಯಿಡುತ್ತಿದ್ದರು. ಆಗ ಶಿವನು ಪ್ರತ್ಯಕ್ಷನಾಗಿ ಬಿದ್ದವರೆಲ್ಲರನ್ನೂ ಬದುಕಿಸಿ ಶ್ರೀಕೃಷ್ಣಾರ್ಜುನರಿಗೆ ಕರ್ತವ್ಯಸ್ಮರಣೆಯನ್ನು ಮಾಡಿಸಿ ಹರಸಿದನು. ಯುದ್ಧಕ್ಕಾಗಿ ಬಂದವರೆಲ್ಲರೂ ತಂತಮ್ಮಲ್ಲಿಗೆ ತೆರಳಿದರು. ಪಾಂಡವರು ತಮ್ಮ ಕಾಡಿನ ಮನೆಯನ್ನು ಸೇರಿದರು.

ಹೀಗೆ ಪಂಚಶಾಖೆಗಳಿಂದ ಕೂಡಿ ಈ ಕಾವ್ಯವೃಕ್ಷವು ಶೋಭಾಯಮಾನವಾಗಿದೆ.

## ಭಾವವಲರ್

ವೃಕ್ಷದ ಸೌಂದರ್ಯಸಂಪತ್ತುಗಳಲ್ಲಿ ಹೂ ಮೇಲು ಮಟ್ಟದ ವಸ್ತು. ಅದು ಮರಕ್ಕೆ ಚೆಲುವನ್ನು ಕೊಡುವುದಲ್ಲದೆ, ಅಳಿಗಳ ಬಳಗವನ್ನು ಸೆಳೆದು, ಜನರ ಮನೋನಯನಗಳನ್ನು ತಣಿಸಿ, ಅವರಿಗೆ ಹಣ್ಣನ್ನು ಕೊಡುವ ನಂಬುಗೆಯನ್ನು ನೀಡುವುದು. ಪರಿಮಳವನ್ನು ಹರಡಿ ಆನಂದಗೊಳಿಸುವುದು. ಕಾವ್ಯದಲ್ಲಿ ಭಾವವೂ ಹಾಗೆಯೇ - ರಸಿಕರನ್ನು ಸೆಳೆದು, ಅವರಿಗೆ ಸದರ್ಥವನ್ನು ಕರುಣಿಸುವುದು. ಹೂವನ್ನು ದೇವರ ಪಾದಕ್ಕೆ ಅರ್ಪಿಸಿ, ಪ್ರಸಾದವೆಂದು ಅದನ್ನೇ ಸ್ವೀಕರಿಸಲೂ ಬಹುದಷ್ಟೆ. ವಿಘ್ನೇಶನ ಪಾದಕ್ಕರ್ಪಿಸಿದ ಭಾವಕುಸುಮವನ್ನೇ ಪ್ರಸಾದವಾಗಿ ಮೊದಲು ತೆಗೆದುಕೊಳ್ಳುವ—

ಈಶಂ ಮೃತ್ಯುವಿನಾಶಿ ಕಾತನಿರೆಯುಂ ಪೂರ್ವಸ್ತುತಂ ಸರ್ವವಿ
ಘ್ನೇಶಂ ರಾಜಪವಾರಣೇಂದ್ರಮುಖನಾಗಿರ್ದುಂ ವಿಷೇಕಾತಿಸಂ ||
ಕಾಂತಂ ಮೂಷಕವಾಹನಂ ಫಣಿಧರಂ ಲಂಬೋದರಂ ದಾಳ್ದು ಸ
ರ್ವಾಶಾವ್ಯಾಪಿ ಗಣೇಶನಾದನೊಸೆದಾದಂ ಮಾಳ್ಕೆ
ನಿರ್ವಿಘ್ನಮಂ (೧-೨)

ಸರ್ವವಿಘ್ನಕ್ಕೂ ಒಡೆಯನೆಂದ ಮೇಲೆ ಅವನಲ್ಲಿ ವಿಘ್ನ-ಅವಿಘ್ನಗಳೆರಡರ ಗುಣವೂ ಇರಬೇಕು ತಾನೆ? ತಂದೆಯು ಮೃತ್ಯುವಿನಾಶಿಯೂ ಈಶನೂ ಆಗಿದ್ದರೂ ಮಗನಾದ ಈತನನ್ನೇ ಮೊದಲು ವಂದಿಸುವುದು ಆತನು ವಿಘ್ನೇಶನಾದುದರಿಂದಲೇ. ಆನೆಯ ಮುಖವಿದ್ದರೂ ಬುದ್ಧಿ ಆನೆಯದಲ್ಲ, ಇಲಿಯ ಮೇಲೆ ಕುಳಿತವನಾದರೂ ಹಾವನ್ನು ಧರಿಸಿಕೊಂಡೇ ಇರುತ್ತಾನೆ. ಅಲ್ಲದೆ ಜೋಲುತ್ತಿರುವ ಹೊಟ್ಟೆಯಿದ್ದರೂ ಚುರುಕುತನಕ್ಕೆ ಅವನಲ್ಲಿ ಏನೂ ಕಡಿಮೆಯಿಲ್ಲ! ಅವನು ಸರ್ವದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿದ್ದಾನೆ; ಗಣಗಳಿಗೆ ಒಡೆಯನೇ ಆಗಿದ್ದಾನೆ. ಆದುದರಿಂದಲೇ ಆತನು ನಿರ್ವಿಘ್ನತೆಯನ್ನು ಕೊಡಲು ಸಮರ್ಥನೆಂಬ ಭಾವವು ಪದ್ಯದಲ್ಲಿದೆ.

ಮುಂದೆ ಸಮುದ್ರವರ್ಣನೆಯು ಮುಕ್ತಪದಗ್ರಹಣಗದ್ಯದಲ್ಲಿದೆ. ಪಕ್ಷಿಗಳೂ, ತುಂತುರು ಹನಿಗಳೂ, ಕೆಮ್ಮೀನುಗಳೂ, ಘೋಷವೂ, ನಾವೆಯ ಹಾಯಿಯೂ, ತೆರೆಗಳೂ, ಚಂಡಮಾರುತವೂ—ಕವಿದೃಷ್ಟಿಗೆ ಹೊಳೆದು ಸೂಸಿದ ವರ್ಣನೆಗಳು ಭಾವಕೌಶಲಕ್ಕೆ ಉದಾಹರಣೆಗಳು.

ಶ್ರೀಕೃಷ್ಣನು ಉದ್ಯಾನದ ಅರ್ಧೋದು ಕೊಳದ ತಡಿಯಲ್ಲಿ ನಿಂತಾಗ ತೆಗೆದ ಛಾಯಾಚಿತ್ರವಿದು—

ಸುತ್ತಣ ಗಿಡಮರವಳ್ಳಿಯ
ಕುತ್ತುರ ಪಸುರ್ಗತ್ತಲೆಸೆವ ತಡಿಯೊಳ್ ಕೃಷ್ಣಂ ||
ಚಿತ್ತಹರಮೆಸಗಿ ರವಿಪಿಲ
ಸತ್ತೇಜೋಮಧ್ಯ ಸರಸಿಯಂ ನಿಟ್ಟಿಪ್ರದುಂ || (ತ್ರಿ.-ಷ.)

ಕೊಳದ ನಡುವೆ ನೀರಿನ ಮೇಲೆ ನೇಸರ ರಣಬಿಸಿಲು ಬಿದ್ದಿದೆ. ನೋಡುವವರ ಕಣ್ಣಿಗೆ ಹೊಳೆಯುವುದು ಅದೇ. ಆ ಕೊಳದ ಸುತ್ತಲೂ ಗಿಡಮರಬಳ್ಳಿಪೊದೆಗಳು ಬೆಳೆದು ಅವುಗಳ ನೆರಳಿನಿಂದ

ಕತ್ತಲಿಸಿದೆ, ಆ ದಡದಲ್ಲಿ ಕೃಷ್ಣನು ಬಂದು ನಿಂತಿದ್ದನು. ಕೃಷ್ಣನೂ ಕಪ್ಪು ತಾನೆ ? ನೆರಳಿನ ಕತ್ತಲಿಗೆ ಕೃಷ್ಣನ ಕಪ್ಪು ಛಾಯೆ ಬೆರೆತು ಮನೋಹರವಾಗಿ ತೋರುತಿತ್ತೆಂದು ಕವಿಯ ಭಾವನೆಗೆ ಹೊಳೆದ ನೋಟವದು. ಕುಶಲ ಚಿತ್ರಕಾರನು ಇದನ್ನು ಚಿತ್ರಿಸಿದರೆ, ಅದು ದೃಷ್ಟಿಗೂ ಕಂಡಂತೆ ಆಗಬಲ್ಲುದಲ್ಲವೆ ?

ಇನ್ನೊಂದು ದೃಶ್ಯವು ಕಣ್ಣಿಗೆ ಕಟ್ಟುವ ಪದ್ಯವಿದು—ಮದುವೆ ಉಪನಯನಾದಿಗಳಲ್ಲಿ ವಧೂವರರಿಗೆ ಅಥವಾ ವಟುವಿಗೆ ಮುತ್ತೈದೆಯರು ಆರತಿಹಾಡನ್ನು ಹಾಡುತ್ತಾ ಆರತಿಯೆತ್ತುವರು. ಅದನ್ನೇ ಗುರಿಯಿಟ್ಟು ಆ ಆಚರಣೆಯ ದೇಸಿಯನ್ನು ಇಲ್ಲಿ ವ್ಯಕ್ತಗೊಳಿಸಿದೆ—ಶ್ರೀಕೃಷ್ಣನು ಉದ್ಯಾನಕ್ಕೆ ಬಂದಾಗಣ ಪ್ರಸಂಗವಿದು —

ಬಳ್ಳಿಯ ಪೆಣ್ ಪೊರೆವಾಡಿಸ
ಬಳ್ಳಿಯನೆಳೆಯುತ್ತೆ ಹರಿಯ ಮುಂದೆಸೆಯಿಂದಂ ||
ಬೆಳ್ಳಿಯ ಮಂದಾರದ ಪೂಸ
ಬೆಳ್ಳಿಯ ತಳಿಯಂ ಮಿಳಿರ್ಚಿತಾರತಿಯೆಂಬೋಲ್ || [೨-೫೦]

ಅಲ್ಲಿ, ಅದೊಂದು ಮಂದಾರದ ಸಸಿಯನ್ನು ಬಳ್ಳಿ ಕವಿದಿತ್ತು. ಮಂದಾರದ ಹೂವನ್ನು ಬಳ್ಳಿ ಸುತ್ತಿ ಓರ್ವ ಲತಾಂಗಿಯು ಆರತಿ ತಟ್ಟೆಯನ್ನು ಹಿಡಿದಂತೆ ತೋರುತ್ತಿತ್ತು. ಹೂಗಳ ಜೇನಿಗಾಗಿ ತುಂಬಿಗಳು ಜೇಂಕರಿಸುತ್ತ ಅಲ್ಲಿ ಸುತ್ತುತಿದ್ದುವು ಗಾಳಿ ಬೀಸುತ್ತಿದ್ದುದರಿಂದ ಆ ಹೂವು ಅತ್ತಿತ್ತ ಅಲ್ಲಾಡುತ್ತಿತ್ತು. ಈ ದೃಶ್ಯವು ಆಕೆ ಓರ್ವಳು ಹಾಡನ್ನು ಹಾಡುತ್ತಾ ಶ್ರೀಕೃಷ್ಣನಿಗೆ ಆರತಿಯೆತ್ತುವಂತೆ ತೋರುತ್ತಿತ್ತು—ಎಂದು ಈ ಪದ್ಯದಲ್ಲಿ ಹೇಳಿದೆ.

ಗಯನಿಗೆ ಅಭಯವಿತ್ತನಂತರ ಅರ್ಜುನನಿಗೆ ತನ್ನ ಹಗೆಯು ಕೃಷ್ಣನೆಂದು ತಿಳಿದಾಗ, ಅವನ ಉದ್ಗಾರಗಳಲ್ಲಿ ಒಂದು ಹೀಗಿದೆ—

ಕೆಕ್ಕಡನೆಳೆಯೊಳ್ ಜನನಿಕ
ರಕ್ಕರಿಯಂ ದೇಶಕಾಲ ಪಾತ್ರವನರಿತೀ ||
ಯಲ್ಕೆನಗೀ ವಿಧಿಯುಂ ತಾ
ನಿಕ್ಕಿದ ಬಿದಿಯೇಕೆ ವಾಣಿಯಂ ಪರಿಸಿಪನೋ || [೪-೨೧]

ಉದ್ಗಾರವಿದು ಶೋಕದ ಕಹಿ ಬೆರೆತಿದ್ದರೂ ಭಾವದ ಸಿಹಿಯಿಂದಾಗಿ ಕಹಿ ತೋರದಂತೆ ಆಗಿದೆ. ಹಿಂದು ಮುಂದು ನೋಡದೆ ತಾನು ವರ್ತಿಸಿಯೇನೋ ಆಯಿತು. ತಪ್ಪು ಆಗಿಯೇ ಹೋಯಿತು. ಇನ್ನೇನು ? ಈ ತಪ್ಪನ್ನು ಆ ವಿಧಿಯ ಮೇಲೆ ಹೊರಿಸಿಬಿಡುವ ಅರ್ಜುನನ ಈ ಮಾತಿನಲ್ಲಿ ಭಾವವು ಅರಳಿ ಕಂಪು ಬೀರುವುದು.

ಹರಿಯೊಂದಿಗೆ ಕಾದುವ ಪ್ರಸಂಗವು ತಮಗೊದಗಿತೆಂಬುದರ ಮೇಲೆ ಸಹದೇವನ ವಿಮರ್ಶೆಯನ್ನು ಕೆಳಗೆ ಕೊಡಲಾಗಿದೆ.

ಬೇಸಗೆ ಕಾಯ್ದು ಭೂತಳವ ತಾಪಿಸೆಯುಂ ಮಳೆಗಂ ನಿಮಿತ್ತಮಾ
ಬೇಸಗೆಯಪ್ಪವೊಲ್ ಹರಿಯೊಳಾಹವದಿಂದತಿಕಷ್ಟಮಾದೊಡಂ ||
ಗಾಸಿಗಳಾಗವಲ್ಲಿ ಬಳಿಯುಂ ಸೊಗಮಪ್ಪುದು ತಪ್ಪದಣ್ಣ ಏಂ
ದೋಸಮಿದೆಂದಸಂದು ಸಹದೇವಕನುನ್ನತ ಬುದ್ಧಿಭಾವಕಂ || (೪-೩೭)

ಸಹದೇವನೆಂದರೆ (ಸಹ-ದೇವ) ದೇವನಿಂದ ಸಹಿತನಾದವನು, ಅಲ್ಲದೆ ಉನ್ನತವಾದ ಬುದ್ಧಿ ಮತ್ತು ಭಾವ (ಮನಸ್ಸು) ಗಳಿಂದ ಕೂಡಿದವನು ಹೀಗಿರುವಾಗ ಆತನ ವಿಚಾರವು ಅದೆಷ್ಟು ಮೇಲ್ಮಟ್ಟದುವಾಗಿರಬೇಡ? ಕೃಷ್ಣನೊಂದಿಗೆ ಕಾದಾಟವೆಂದರೆ ಅದು ಬಂದ ಬೇಸಗೆ-ಮಳೆಗೆ ಕಾರಣವಾಗಿರುವ ಸೆಕೆಗಾಲ. ಹೀಗಿರುವಾಗ ಹೆದರಿಕೆಯೇಕೆ ? ಬೇಸಗೆಯಲ್ಲಿ ಎಲ್ಲವೂ ಒಮ್ಮೆ ಒಣಗಿದಂತೆ ತೋರಬಹುದಾದರೂ ಬೇಸಗೆಯ ಅಂತ್ಯಕ್ಕೆ ಮಳೆ ಬಂದೇ ಬರುವುದು. ನೆಲವೆಲ್ಲ ಚಿಗುರಿ ಕಂಗೊಳಿಸುವುದು.

ಈ ಯುದ್ಧದಿಂದ ಏನೂ ಗಾಸಿಯಾಗದು, ಸುಖವೇ ಉಂಟಾದೀತು — ಎಂದು ಸಹದೇವನ ಮನೋಭಾವವಿಲ್ಲಿಭಾವದ ಕಳೆಯಿಂದ ಬೆಳಗಿದೆ.

ಈ ಕಾವ್ಯದಲ್ಲಿ ಭಾವದ ಹೂಗಳನ್ನಷ್ಟೊ ಕಾಣಬಹುದು.

## ಸದರ್ಥನೆ ಫಲಂ

ಕಾವ್ಯವೃಕ್ಷದ ಹಣ್ಣಿನ ರುಚಿಯನ್ನು ಸ್ವಲ್ಪ ಮಟ್ಟಿಗಾದರೂ ಇಲ್ಲಿ ನೋಡೋಣ. ಅರ್ಥವು ಕೂಡಾ ಭಾವದಲ್ಲೇ ಅಂತರ್ಗತವೂ ಆಗಬಹುದು. ಏಕೆಂದರೆ ಹೂವೇ ಹಣ್ಣಾಗುವುದಷ್ಟೆ. ಭಾವವನ್ನು ಕುರಿತು ಆಡಿದುದರಲ್ಲೇ ಅರ್ಥವೂ ಒಳಗೊಂಡಿದೆ. ಆದರೂ ಇಲ್ಲಿ ಇನ್ನು ಕೆಲವನ್ನು ಹಣ್ಣಿಗೆ ಉದಾಹರಣೆಯಾಗಿ ಕೊಡಲಾಗುವುದು.

ಶ್ರೀಕೃಷ್ಣನ ಪ್ರಜೆಗಳೆನಿಸುವವರೆಂದರೆ —

ಪಕ್ಷಹನಾನದವರ್ ಶ
ಪಕ್ಷಯುಗದೆ ಶುಕ್ಲಪಕ್ಷಮುದನನುಕರಿಸು ||
ತ್ತಕ್ಷಯ ಕಳೆವಡೆಯುತೆ ತ
ಮ್ಮ ಕ್ಷದೊಳಾ ಕೃಷ್ಣಪಕ್ಷಮಂ ಪಿಡಿದೆಸೆವರ್ || [೨-೯]

ಅವರು ಪಕ್ಷಹಿಡಿಯದವರು (ಪಕ್ಷ — ಪಂಗಡ ಕಟ್ಟಿ ಅಧಿಕಾರಕ್ಕಾಗಿ ಹೋರಾಡದವರು ಅಥವಾ ಪಕ್ಷಪಾತರಹಿತರು). ಅವರೂ ಚಂದ್ರನ ಶುಕ್ಲಪಕ್ಷವನ್ನು ಅನುಕರಣೆ ಮಾಡುತ್ತಾ, ಹೆಚ್ಚಿನ ಕಳೆ [ಕಳೆ. ಕಲೆ, ಕಾಂತಿ] ಯನ್ನು ತಾಳುತ್ತಿದ್ದರು. ಕೃಷ್ಣಪಕ್ಷವು ಕಳಾರಹಿತವಾದುದರಿಂದ ಅದನ್ನು ಅವರು ಅನುಸರಿಸಲಿಲ್ಲ. ಆದರೆ ಕೃಷ್ಣಪಕ್ಷವನ್ನು [ಶ್ರೀಕೃಷ್ಣನ ಪಕ್ಷವನ್ನು] ತಮ್ಮ ನೆಲೆಯಾಗಿ ಮಾಡಿಯೇ ಅವರು ಶೋಭಿಸಿದರು—ಎಂದು ಇಲ್ಲಿ ಅರ್ಥವಿದೆ. ಈ ಅರ್ಥವು ಕಾವ್ಯವೃಕ್ಷದ ಒಂದು ಸವಿಯಾದ ಹಣ್ಣಲ್ಲವೆ ?

ಶ್ರೀ ಕೃಷ್ಣನು ಸಿಟ್ಟಾಗಿ, ಕೊಲ್ಲುವೆನೆಂದು ಮಾಡಿದ ಪ್ರತಿಜ್ಞೆಯ ವಿವರವನ್ನು ನಾರದನು ತಿಳಿಸಿ ಹೋದಾಗ ಗಯನು ತನ್ನ ಅಕೃತ್ಯದಿಂದ ಆಕುಲಚಿತ್ತನಾಗಿ ಹೀಗೆನ್ನುವನು—

ತೋಷಿತನೊಳ್ ಬಹುಚಿಂತಾ
ದೂಷಿತನೊಳ್ ಮುಮತೆ- ದೈನ್ಯ ಮೊಪ್ಪದು ಬಹುಧಾ ||
ತೋಷಿತನೇಗಳ್ ಚಿಂತಾ
ದೂಷಿತನೀ ನುಡಿಗೆ ಗಯನುದಾಹೃತನಲ್ತೇ || (೩-೨೫)

ತೋಷಿತನಲ್ಲಿ ಗರ್ವವೂ ಚಿಂತಾದೂಷಿತನಲ್ಲಿ ದೈನ್ಯವೂ ಆಗುವುದು ಸಹಜವಾದರೂ ಹಾಗಾಗಬಾರದು. "ಸುಖದುಃಖೇಸಮೇ ಕೃತ್ವಾಲಾಭಾಲಾಭೌ ಜಯಾಜಯೌ" ಎಂಬ ಗೀತೆಯ ಅರ್ಥ ಇಲ್ಲಿ ಮೂಡಿದೆ. 'ನಕ್ಕಷ್ಟೇ ಅಳಬೇಕು' ಎಂಬ ಮಾತು ಇಲ್ಲಿ ಸರಿಹೋಗುವುದು. ಬಹಳವಾಗಿ ಸಂತೋಷಗೊಂಡವನು ಚಿಂತೆಯಿಂದ ದೂಷಿತನಾಗುತ್ತಾನೆ–ಎಂಬುದಕ್ಕೆ ಗಯನೇ ಇಲ್ಲಿ ಉದಾಹರಣೆಯಾಗಿದ್ದಾನೆ. ಈ ಅರ್ಥವಿಲ್ಲಿ ಮಾರ್ಮಿಕವಾಗಿ ನೀತಿಯನ್ನು ಬೋಧಿಸುವುದು.

ಕೃಷ್ಣನೊಡನೆ ಕಾದಬೇಕಾಗಿ ಬಂತಲ್ಲಾ—ಎಂಬ ದುಃಖದಿಂದ ಅರ್ಜುನನೆನ್ನುವ ಇನ್ನೊಂದು ಪದ್ಯ ಹೀಗಿದೆ —

ಕೋಪಾಟೋಪದೊಳಿಂದು ಕೌರವರೊಳೇ ಪ್ರೋನ್ಮತ್ತ ದಿಗ್ದೇಶ ಭೂ
ಮಾಪಾಲರ್ಕಳೊಳೇ ಕಡಂಗಿ ಪೂಣರ್ವೆಂ* ಪಂಚೇಂದ್ರಿಯ ವ್ರಾತದ ||
ತೀ ಪಾಂಡೂದ್ಭವರೆಮ್ಮ ಕಾವ ಸುಮತಿ ಶ್ರೀ ಕೃಷ್ಣನಂ ಭಾವಸಂ
ಗೋಪೀನಾಥನನೆಂತು ಕೂಗಿಕರೆವೆಂ ಮೇಣೆಂತು ಮಾರಾಂಪೆನೋ ||

(೪-೨೨)

ಇಲ್ಲಿ ಪಂಚೇಂದ್ರಿಯದ ವ್ರಾತದಂತೆ ಪಂಚಪಾಂಡವರಾದ ನಮ್ಮನ್ನು ಕಾಪಾಡತಕ್ಕ ಭಾವನಾದ ಶ್ರೀಕೃಷ್ಣನನ್ನು ಎಂಬುದು ಒಂದು ರೀತಿಯ ಅರ್ಥವಾದರೆ, [ಭಾವ - ಮನಸ್ಸು] ಪಂಚೇಂದ್ರಿಯಗಳನ್ನು ಕಾಪಾಡುವ ಮನಸ್ಸಿನಂತಿರುವ ಶ್ರೀಕೃಷ್ಣನನ್ನು - ಎಂಬ ಅರ್ಥವೂ ಸಿದ್ಧಿಸುವುದು.

ಆ ಮೇಲೆ ಧರ್ಮರಾಯನು ಈ ಸಂಗತಿಯನ್ನರಿತು “ ನೀಂ ಪಡಿಯಾಡೆ ನಾಡೆ ತಿರೆಯಂ ಕಳೆದಾತನೆನಾನೆ ಸೋಲ್ತನಪ್ಪೆಂ ” ಎನ್ನುವನಷ್ಟೆ, ಇಲ್ಲಿ ಆತನು ಅರ್ಜುನನ ತಪ್ಪನ್ನು ಅವನ ಮೋರೆಗೆ ಕಟ್ಟಿ ತೋರಿಸಲು ಹವಣಿಸಿದುದು, ಹಾಗೆ ಮಾತೆತ್ತುವಾಗಲೇ ಅವನ ಅಳ್ಕು, ಮಾತನ್ನು ಬಿಗಿಹಿಡಿಯಲು ನೋಡಿರಬೇಕು. ಧರ್ಮರಾಯನು ಹಿಂದು ಮುಂದು ವಿಚಾರವಿಲ್ಲದೆ ಜೂಜಾಟಕ್ಕೆ ಮನಸ್ಸು ಮಾಡಿ, ಆಡಿ, ರಾಜ್ಯವನ್ನೆಲ್ಲಾ ಕಳೆದುಕೊಂಡಿಲ್ಲವೆ? ಈ ನೆನಪು ಆತನ ಚಿತ್ತವನ್ನು ಕುತ್ತಿರಬೇಕು. ಆದುದರಿಂದಲೇ ಅವನು ಮೊದಲನೆಯ ವಾಕ್ಯವೆಂಬ ಅಡ್ಡಣವನ್ನು ಅರ್ಜುನನ ಅಡ್ಡಕ್ಕೆ ಹಿಡಿದಿದ್ದಾನೆ. “ ನೀನು ನನಗೆ ಪ್ರತಿಯಾಗಿ ಆಡಿದೆಯಾದರೆ, ರಾಜ್ಯವನ್ನು ಕಳೆದುಕೊಂಡ ನಾನೇ ಸೋತವನಾಗುವೆನು ”— ಅರ್ಥಾತ್, ನಿನ್ನಲ್ಲಿ ತಪ್ಪನ್ನು ಸ್ಥಾಪಿಸಲು ಅಯೋಗ್ಯನಾಗುವೆನು - ಎಂದು ಧರ್ಮರಾಯನು ಹೇಳಿದಂತೆ ಅರ್ಥವಾಗುವುದು. ಇದಕ್ಕೆ ಇನ್ನೊಂದು ರೀತಿಯ ಅರ್ಥವೂ ತೋರುತ್ತವೆ—

(ನೀಂ ಪಡಿಯಾಡೆ—) ನೀನು ಗಯನನ್ನು ಕಾಪಾಡುವೆನೆಂದು ಪ್ರತಿಜ್ಞೆ ಮಾಡಿಹೆಯಷ್ಟೆ. ಇದರಿಂದ ಹರಿಯೇ ವೈರಿಯಾಗಿದ್ದಾನೆಂಬುದನ್ನು ತಿಳಿದ ಮೇಲೆ, ಮೊದಲಿನ ಮಾತಿಗೆ ವ್ಯತಿರಿಕ್ತನಾಗಿ ಆಡಿದರೆ, ಅರ್ಥಾತ್, ರಕ್ಷಿಸಲು ನಿರಾಕರಿಸಿದೆಯಾದರೆ; ಆ ಸೋಲವು ನನಗೆಂದೇ ನಾನು ಭಾವಿಸುವೆನು. ಮೊದಲು ರಾಜ್ಯವನ್ನು ಕಳೆದು ಸೋಲನ್ನು ಅನುಭವಿಸುತ್ತಿರುವ ನನೆಗೆ ಅದು ಇನ್ನೊಂದು ಸೋಲಾಗುವುದು, ಆದುದರಿಂದ ನಿರ್ಣಯವನ್ನು ಮಾರ್ಪಡಿಸಲು ಸಾಧ್ಯವಿಲ್ಲ

ವೆಂಬ ಅರ್ಥವು ಹೊಳೆಯುವುದು.

ಧರ್ಮರಾಯನ ಮತ್ತಿನ ಮಾತನ್ನು ಸ್ವಲ್ಪ ಲಕ್ಷಿಸುವ–
ಬರೆವುದು ಬಗೆವುದು ಮಾಜಲ್
ನೆರೆಗುಂ ನುಡಿಮಾಜಲರಿದು ನಮ್ಮನ್ನರ್ಗೆ ॥ [೪-೨೪]

ಇಲ್ಲಿ ಸತ್ಯಯುಗದ ಚಿತ್ರ ನಮ್ಮ ಮುಂದೆ ಬರುವುದು. ಈಗಿನ ಕಾಲ ವೆಂದರೆ, ಏನೊಂದು ಹೇಳಿದರೂ 'ಬರಹ ಮೂಲಕ ತಿಳಿಸು' [Give it in writing] ಎಂಬ ಕಾಲ–ಬಾಯಲ್ಲಿ ನುಡಿದುದು ನಂಬಲರ್ಹವಲ್ಲವೆನ್ನುವ ಕಾಲ. ಅದಕ್ಕೆ ಅನುಗುಣವಾಗಿ ಇಂದಿನ ವರು ಒಮ್ಮೆ ಹೇಳಿದುದನ್ನೇ ಮತ್ತೊಮ್ಮೆ ಹೇಳಲೇ ಇಲ್ಲವೆನ್ನುವರು. ಅಥವಾ ಮೊದಲು ಹೇಳಿದುದು ನಿಜವಾದರೂ ಇಂದಿಗೆ ಅದನ್ನೇ ಬೇರೆ ಯಾಗಿ ಮಾರ್ಪಡಿಸುತ್ತ 'ಅಂದು ಹೇಳಿದುದೂ ನಾನೇ, ಇಂದು ಹೇಳುವುದೂ ನಾನೇ; ಅಂದಿಗೆ ಅದು ಸತ್ಯ, ಇಂದಿಗೆ ಇದು ಸತ್ಯ' ಎನ್ನುತ್ತ 'ಸತ್ಯ'ಕ್ಕೆ ಹೊಸ ವ್ಯಾಖ್ಯೆಯನ್ನು ಕೊಡುವರು- ಆಡಿದ ಮಾತಿಗೆ ತಪ್ಪುವರು. ಆದರೆ ಧರ್ಮರಾಯನ ಅಭಿಪ್ರಾಯವು ಏತದ್ವಿ ರುದ್ಧವಿದೆ. "ಬರೆದುದನ್ನು ಅಳಿಸಿಬಿಡಬಹುದು, ಆಲೋಚಿಸಿದುದನ್ನು ಮರೆಮಾಡಬಹುದು, ಆದರೆ ಆಡಿದುದನ್ನು ಅಳಿಲಿಲ್ಲವೆನ್ನಲು ಸಾಧ್ಯವೇ ಇಲ್ಲ" ಎಂದು ಆತನು ಹೇಳುವನು.

ಮುಂದೆ ಸಂಧಿಗೆ ಬಂದ ಅಕ್ರೂರನು ಅಭಿಮನ್ಯುವಿನ ನೈಜಗೌರವ ವನ್ನು ಅರ್ಜುನನಿಗೆ ಹೀಗೆ ತಿಳಿಸುವನು. ಮೊತ್ತಮೊದಲು ಅವನ ಆಟದ ವಿಚಾರ ಆಮೇಲೆ ಪಾಠದ ವಿಚಾರ ಬರುವುದು.

ಆಟದೊಳವನಿಟ್ಟ ಸೆಂ
ಡೇಟಂ ಕಾಲ್ಮುಸಿದು ಬೀಳ್ವರೋರಗೆ ಗುವರರ್ ॥
ಪಾಟದೊಳೋಜರ್ಗರಿಪ
ಲ್ಕಾಟಿಪನಂತಾತನರಿವನಾರ್ಪೆರಕರಿವರ್ ॥ (೪-೩೦)

ಅಭಿಮನ್ಯುವನ್ನು ವರ್ಣಿಸುವ ಈ ಪದ್ಯದಲ್ಲಿ ಶಿಕ್ಷಣತತ್ವವು ಅಡಗಿದೆಯೆನ್ನಬಹುದು. ಆಟದೊಂದಿಗೆ ಅಥವಾ ಆಟದ ಮೂಲಕ ಪಾಠವಾಗಬೇಕೆಂಬುದು ಶಿಕ್ಷಣಜ್ಞರ ಮತ. ಅದರಂತೆ ಆಟಾಳಿಕಂದನಾದ ಅಭಿಮನ್ಯುವಿನ ಆಟದ ಶಕ್ತಿಯನ್ನುಮೊದಲು ಅಕ್ರೂರನು ತಿಳಿಸುವನು. ಅಭಿಮನ್ಯು ಕುಟ್ಟಿದ ಚೆಂಡಿಗೆ ಕಾಲುಗೊಡುವವರೇ ಇಲ್ಲವಂತೆ, ಅಷ್ಟು ಭರ ಆ ಚೆಂಡಿಗೆ! ಇದರಿಂದ ಆ ಬಾಲನ ಶಕ್ತಿಯೆಷ್ಟೆಂಬುದೂ ಕಲ್ಪಿತವಾಗುವುದು. ಆಟದ ಪ್ರಾವೀಣ್ಯದಿಂದ ನೀತಿ-ನಿಯಮಪಾಲನೆಯ ಗುಣವೂ ಆತನಲ್ಲಿ ಅಸದೃಶವಾಗಿ ಇರಲೇಬೇಕು. ಇನ್ನು ಪಾಠದ ವಿಚಾರವೆಂದರೆ, ಅದರಲ್ಲೂ ಆತನದು ಮೇಲುಗೈಯೆ. ಆತನು ಗುರುಗಳಿಗೆ ಹೇಳಿಕೊಡುವಷ್ಟು ಬಲ್ಲನಂತೆ. ಆದರೆ, ಗುರುಗಳಿಗೆ ಹೇಳಿಕೊಡುತ್ತಾನೆಂದು ಇಲ್ಲಿ ಹೇಳಲಿಲ್ಲ. ವರ್ಗದಲ್ಲಿ ವಿದ್ಯಾರ್ಥಿಯೊಬ್ಬನು ಗುರುವಿನ ತಪ್ಪನ್ನು ಖಂಡಿಸುವುದಾಗಲೀ ತಿಳಿಯದುದನ್ನು ಹೇಳಿಕೊಡುವುದಾಗಲೀ ತಕ್ಕುದಲ್ಲ; ಅದು ಶಿಸ್ತುಭಂಗವಾಗುವುದು. ಶಿಸ್ತು ಶಿಷ್ಯನ ಮುಖ್ಯ ಗುಣವು. ಅವನು ಗುರುವಿಗೆ ತಪ್ಪಿದಲ್ಲಿ ಹೇಳಿಕೊಡುವುದಾದರೂ ಅದು ಏಕಾಂತದಲ್ಲಾಗಬೇಕು. ಆದುದರಿಂದ "ಅರಿಪಲ್ಕೆ ಆಟಿಸಂ" ಅರ್ಥಾತ್, ತಿಳಿಸಲು ಬಯಸುವನು ಎಂದಿಷ್ಟೇ ಇಲ್ಲಿ ಹೇಳಿದೆ.

ಮುಂದೆ ಅರ್ಜುನನು ಸಿಟ್ಟಿನಿಂದ ಅಕ್ರೂರನಿಗೆ ಹೀಗೆ ಹೇಳುವನು—

ಹರಿ ನೀರಸನುಡಿವಿನಂಬರ
ಚರ-ಕೀಟಕೆ ತೀರದರ್ಜುನದ್ರುಮ ಶಾಖಾ ||
ಕರಮಂ ದಿಂಕಿಡೆ ನೆರೆಗುಮೆ
ಚರಿಗಳ್ಕರೆಸೆಂದುಮೆನ್ನ ಪೂಜ್ಯೆಯುಮಾಳ್ದಂ ||  (೪-೪೮)

ಇಲ್ಲಿ ಶ್ಲೇಷಾರ್ಥದಿಂದ ನೀರಸನುಡಿಯೆಂಬುವ ಕಪ್ಪಿಗೆ ಪಡಬಲ್ಲಿರುವ

ಪುತ್ತಿಮರದ ಗೆಲ್ಲಿನಲ್ಲಿರುವ ಹಾತೆಗೋಸ್ಕರ ಹಾರಲು ಸಾಧ್ಯವಾಗದೆಂದೂ, ನೀರನಡುವಿನ ದ್ವಾರಕೆಯ ಕೃಷ್ಣನಿಗೆ ಅರ್ಜುನನ ಕೈಯ್ಯಲ್ಲಿ (= ವಶದಲ್ಲಿ) ರುವ ಖೇಚರನೆಂಬ ಕೀಟಕ್ಕಾಗಿ ಹಾರಲು ಸಾಧ್ಯವಾಗದೆಂದೂ ಎರಡು ದೃಷ್ಟಿಯ ಅರ್ಥ ಹೊಳೆಯುವುದು.

ಇಂತಹ ಅರ್ಥಮಹತ್ವವುಳ್ಳ ಕಾವ್ಯಾಂಶಗಳು ಇದರಲ್ಲಿ ಇನ್ನೆಷ್ಟೋ ಇವೆ. ದಿಗ್ದರ್ಶನಕ್ಕಾಗಿ ಇವಿಷ್ಟನ್ನು ಮಾತ್ರ ಕೊಡಲಾಗಿದೆ.

## ಶಬ್ದಂ ಕೋಕಿಲ್

ಈ ಕಾವ್ಯವೃಕ್ಷದಲ್ಲಿ ಅಲ್ಲಲ್ಲಿ ಇಂಪಾಗಿ ಶಬ್ದಿಸುವ ಕೋಗಿಲೆಯ ಸುಸ್ವರವೆಂದರೆ, ಶಬ್ದಗಳು. ಶಬ್ದಗಳನ್ನು ಅರ್ಥದೃಷ್ಟಿಯಿಂದಲೂ ನಾದಮಾಧುರ್ಯದೃಷ್ಟಿಯಿಂದಲೂ ತೂಗಿ ಇಟ್ಟುದರಿಂದಾದ ಪದಮೈತ್ರಿ (ಶಯ್ಯೆ) ಈ ಕಾವ್ಯದ ಇನ್ನೊಂದು ಲಕ್ಷಣವು.

ಅಲ್ಲಲ್ಲಿ ಅನುಪ್ರಾಸಗಳಿಂದ ಕೂಡಿದ ೧-೯, ೨-೮೧, ೨-೨೧ ಇತ್ಯಾದಿ ಪದ್ಯಗಳನ್ನು ಈ ಕಾವ್ಯದಲ್ಲಿ ನೋಡಬಹುದು.

ಇಂತಹ ಶಬ್ದಾಲಂಕಾರಗಳು ಕಾವ್ಯಕ್ಕೆ ಬಾಹ್ಯಸೌಂದರ್ಯವನ್ನು ಉಂಟುಮಾಡುತ್ತವೆ. ಕೆಲವು ದೇಸಿ ಶಬ್ದಗಳನ್ನು ಇದರಲ್ಲಿ ಕಾಣಬಹುದು—

ಬಾಳೆಯ ಕಿತ್ತಿಲೆ [೨-೫೬]—ಬಾಳೆಯೆಲೆಯನ್ನು ಒಂದು ಬದಿಯಿಂದ ಹರಿದು ತೆಗೆದರೆ, ಆ ತೆಗೆದ ಸಣ್ಣಭಾಗವನ್ನು ಕಿತ್ತಿಲೆಯೆನ್ನುವರು ಕಿರಿದು + ಎಲೆ— ಕಿತ್ತಿಲೆಯಾಗುವುದು, ಇದಲ್ಲದೆ 'ಕೀತು' ಎಂಬ ಶಬ್ದವೂ ದೇಸಿಯಾಗಿ ಪ್ರಯೋಗದಲ್ಲಿದೆ.

ಮದ್ದುಗುತ್ತು—ಮದ್ದುಗುತ್ತು ಎಂದರೆ ಇಂಜೆಕ್ಷನ್. ಈ ಅರ್ಥದಲ್ಲಿ ಈ ಶಬ್ದಪ್ರಯೋಗ ಇದೇ ಹೊಸತು.

ಎಣ್ಣೆದೇರ್—ಇದು ಬಸ್ಸಿಗೆ ಅಚ್ಚಗನ್ನಡದ ಶಬ್ದ. ಈ ಪ್ರಯೋಗವೂ ಹೊಸತು.

ದೇಸಿ ಅರ್ಥವಾಗದಿದ್ದಲ್ಲಿ ಕೆಳಗಿನ ಪದ್ಯಕ್ಕೆ ಸರಿಯಾದ ಅರ್ಥವಾಗದು. ಅರಿಭಯಂಕರನೆಂಬವನು ನಿರ್ಭೀತನಾಗಿ ತನ್ನ ಶೌರ್ಯವನ್ನು ಶ್ರೀಕೃಷ್ಣನೊಡನೆ ಹೀಗೆ ಕೊಚ್ಚಿಕೊಳ್ಳುವನು—

ಯಮಸುತನಂ ನೀರ್ದಾಂಟಿಸಿ
ಸಮರಜನ ಕುತ್ತಿಕೆಡಹಿ ಮೊನೆಯೊಳ್ ಮೊನೆಯೊಳ್ ||
ಯಮಳರ ಕಾಪಿಟ್ಟಾಂ ಸಂ
ಭ್ರಮಿಯಿಸಿ ನರನಂ ಮರಳ್ಚಿ ತರ್ಪೆಂ ಗಯನಂ || [೬-೫]

ಗಡಿಗೆಗಳನ್ನು ಮನೆಯಲ್ಲಿ ಮುಗುಚುವ ಕಳ್ಳಬೆಕ್ಕನ್ನು ನಿವಾರಣೆ ಮಾಡುವುದಕ್ಕಾಗಿ ಅದನ್ನು ಗೋಣಿಚೀಲದಲ್ಲಿ ತುಂಬಿಸಿ, ಕೊಂಡು ಹೋಗಿ ಯಾವುವಾದರೂ ಹರಿಯುವ ಹೊಳೆಯ ಆಚೆಯ ದಡದಲ್ಲಿ ಬಿಟ್ಟುಬಿಡುವ ಕ್ರಮವಿದೆ. ಹಾಗೆ ಬಿಟ್ಟಲ್ಲಿ ಅದರ ಕಾಟ ತಪ್ಪುವುದು. (ಕೊಲ್ಲುವುದು ಪಾಪಕರವಷ್ಟೆ.) ಧರ್ಮರಾಯನನ್ನು ಬೆಕ್ಕಿಗೆ ಸರಿಯಾಗಿ ಎಣಿಸಿ, ಆತನನ್ನು ನೀರಿನ ಆಚೆಗೆ, ಪ್ರಾಯಶಃ ಸಮುದ್ರದಾಚೆಗೆ ದಾಟಿಸಿಬಿಡುವೆನೆಂಬುದೇ ಇಲ್ಲಿ ಅಭಿಪ್ರಾಯ. ಯಮಳರ ಕಾಪಿಟ್ಟು ಎಂಬಲ್ಲಿ, ಏನೂ ಸಾಗದ ಆ ಬಡಪಾಯಿ ಅವಳಿಮಕ್ಕಳನ್ನು ಉಳಿಸಿ ಎಂದೂ ಅರ್ಥವಾಗಬಹುದು. ಆಗ 'ಕಾಪು' ಎಂಬುದು ದೇಸಿಯೆನಿಸದು. 'ಕಾಪು' ಎಂಬುದು ತುಳುನಾಡಿನ ಕನ್ನಡಿಗರಿಗೆ ತಿಳಿಯದುದಲ್ಲ. ಹಳ್ಳಿಗಳಲ್ಲಿ ಗದ್ದೆಗೆ ಪೈರು ನೆಟ್ಟಾದಮೇಲೆ ಅದಕ್ಕೆ ಕಾಪುಗುತ್ತಾರೆ. ಸೌತೆ ಹಿತ್ತಲು, ಕಬ್ಬಿನ ಹಿತ್ತಲುಗಳಲ್ಲಿ ಕಾಪಿಗಾಗಿ (ರಕ್ಷಣೆಗಾಗಿ) ಹುಲ್ಲಿನ ಮನುಷ್ಯನನ್ನೇ ಮಾಡಿ ನಿಲ್ಲಿಸುವರು. ಇದನ್ನು 'ಬೆರ್ಚಪ್ಪ' ಎನ್ನುವರು. ಮನುಷ್ಯರ ದೃಷ್ಟಿದೋಷವು ಆ ಪೈರಿಗೆ ತಾಗದಂತೆಯೂ ನರಿ ಮುಂತಾದ ಮೃಗಗಳು ಕಂಡು ಹೆದರುವಂತೆಯೂ ಇಂತಹ ಕಾಪ್ಪ

ಉಪಯುಕ್ತವಾಗುವುದು. ನಕುಲ-ಸಹದೇವರನ್ನು ಕೊಂದು ಕಾಪು ಇಟ್ಟಾಗ, ಉಳಿದೆಲ್ಲರೂ ಹೆದರಿ ಓಡಿಹೋಗುವರೆಂದು ಈ ದೇಸಿಪದ ಪ್ರಯೋಗದ ಭಾವವು.

ಹೀಗೆ ಶಬ್ದವು ನಾದಮಾಧುರ್ಯದಿಂದ ಕಿವಿಗಿಂಪು ಬೀರುವುದಲ್ಲದೆ, ಭಾವಮಾಧುರ್ಯದಿಂದ ಮನಸ್ಸಿಗೂ ಚೆಲುವನ್ನು ಬೀರುವುದು.

## ಛಂದಂ-ಅನ್ವಿತ-ಪರ್ಣಂ

ಎಲೆಯಿಲ್ಲವಾದರೆ ಮರವೇ ಇರಲಾರದು. ಋತುಧರ್ಮದ ದೆಸೆಯಿಂದ ಎಂದಾದರೊಮ್ಮೆ ಎಲೆಗಳೆಲ್ಲವೂ ಉದುರಿದರೂ ಪುನಃ ಚಿಗುರಿ ಕಾಣಿಸಿಕೊಳ್ಳುವುವಷ್ಟೆ. ಪುನಃ ಚಿಗುರಲೇ ಇಲ್ಲವಾದರೆ ಮರವು ಸತ್ತಿತೆಂದೇ ತಿಳಿಯಬೇಕು. ಆದುದರಿಂದ ಪದ್ಯಕಾವ್ಯವೆಂಬ ವೃಕ್ಷಕ್ಕೆ ಅದರ ಛಂದಸ್ಸೇ ಎಲೆಗಳು. [ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್—ಗೀತೆ.] ಸತ್ಯಾಪಲೋಕನಕಾವ್ಯದಲ್ಲಿ, ಚಂಪೂಕಾವ್ಯಗಳಲ್ಲಿ ಶೋಭಿಸುವ ಪ್ರಸಿದ್ಧ ವೃತ್ತಗಳು, ಕಂದಪದ್ಯಗಳು ಮಾತ್ರವಲ್ಲದೆ ಪಿರಿಯಕ್ಕರ, ತ್ರಿಪದಿ, ಮಂದಾನಿಲರಗಳೆ, ಅರಲರಗಳೆಗಳೂ ಕಾಣುತ್ತವೆ. ಅರಲರಗಳೆಯೆಂಬುದು ಕುಸುಮಷಟ್ಪದಿಯ ಮೂರನೆಯ ಅಥವಾ ಆರನೆಯ ಪಾದಗಳ ಪುಂಜವಾಗಿದೆ. ಕೆಲವೆಡೆ ಪದ್ಯಗಂಧಿ ಗದ್ಯಗಳೂ ಇವೆ ಉದಾ—"ನಾಳೆಯೆ ಪೊರಮಡುಗೆ ಮೊನೆಗೆ ಬಲ್ಲಣೆ ಪುರದಿಂ" [೪-೪೯ ಪದ್ಯಾನಂತರದ ಗದ್ಯ.] ಇದು ಕಂದಪದ್ಯದ ಎರಡನೆಯ ಪಾದವಾಗುವುದು.

## ರಸ-ಜೀವಂ

ರಸವೇ ಕಾವ್ಯದ ಜೀವಾಳವು, ಮರದ ಜೀವಾಳವೂ ರಸವೇ. ರಸಾತ್ಮಕವಾದ ವಾಕ್ಯಗಳ ಸಮೂಹವೇ ಕಾವ್ಯವೆನಿಸುವುದು. "ವಾಕ್ಯಂ ರಸಾತ್ಮಕಂ ಕಾವ್ಯಂ" ಎಂದು ಕಾವ್ಯದ ಲಕ್ಷಣವನ್ನು ಹೇಳುವರು.

ಸತ್ಯಾವಲೋಕನ ಕಾವ್ಯವು ವೀರರಸಪ್ರಧಾನವಾದುದು. ಹರಿ-ಹರ ಸಮರವೇ ಈ ಕಾವ್ಯವಸ್ತುವೆಂದ ಮಾತ್ರದಿಂದಲೇ ಇದು ವಿದಿತವಾಗಿದೆ. ವೀರರಸವಲ್ಲದೆ ಇತರ ರಸಗಳ ಸನ್ನಿವೇಶಗಳೂ ಇದರಲ್ಲಿ ಬರುವುವು.

ವನವಿಹಾರವನ್ನು ಮುಗಿಸಿ ವಲ್ಲೀಗೃಹದಲ್ಲಿದ್ದ ಶ್ರೀಕೃಷ್ಣನು ಗಯನ ಉದ್ಧೃತಿಯಿಂದ ಕೆರಳಿದ ಭಾಗವಿದು. ರೌದ್ರಕ್ಕೆ ಉದಾಹರಣೆ ಯಾಗಿದೆ. [ಆ. ಇ. ಪ. ೧೦.]

ವೀರರಸಕ್ಕೆ ಉದಾಹರಣೆಯಾಗಿ ಅರ್ಜುನನ ಪ್ರತಿಜ್ಞೋಕ್ತಿ ಹೀಗಿದೆ --[ಆ. ೪, ಪ. ೧೯.]

ಅಭಿಮನ್ಯುವಿನ ವೀರೋಕ್ತಿಯಿದು--[ಆ. ೪, ಪ. ೩೩.]

ಕರುಣರಸದ ಪದ್ಯವಿದು. ಗಯನು ಅತ್ಯಂತಾಕುಲಚಿತ್ತನಾಗಿ ಹೇಳುವ ಮಾತಿನಿಂದ ಕೂಡಿದೆ--[ಆ. ೩, ಪ. ೨೬.]

ಅರ್ಜುನನಲ್ಲಿ ಉಕ್ಕಿದ ಕರುಣರಸವಿದು--[ಆ. ೪, ಪ. ೨೦.]

ವಾಸವಾತ್ಮಜನಿಂದ ಕೆಡೆದ ವಾಸುದೇವನಂ ನೋಡಿ ಭೂದೇವಿ ಮರುಗುವ ಪದ್ಯಭಾಗವಿದು--[ಆ. ೮, ಪ. ೨೦.]

ಶಾಂತರಸವನ್ನು ನಿರೂಪಿಸುವ ಭಾಗವಿದು. ಕೈಲಾಸಾದ್ರಿಯಲ್ಲಿದ್ದ ಋಷ್ಯಾಶ್ರಮದ ತಪಸ್ವಿಗಳ ವರ್ಣನೆ--[ಆ. ೩, ಪ. ೪೨-೪೪.)

## ತಾಯ್ನೇರವೋಲ್ ದೇವಿ ವಾಕ್ಯಂ

ಇಷ್ಟೆಲ್ಲಾ ಶೋಭೆಗಳಿಂದಲೂ ಸಜೀವತೆಯಿಂದಲೂ ಕೂಡಿದ ಕಾವ್ಯವೆಂಬ ವೃಕ್ಷವು ಕಾಲನ ಮೂದಲೆಯನ್ನು ಗಣಿಸದೆ, ಬಿರುಗಾಳಿ ಹೊಡೆದರೂ ಮುಗುಚದೆ, ನಿಂತುಕೊಂಡಿದ್ದರೆ ಮಾತ್ರ ಆ ವೃಕ್ಷದ

ಗೆಲ್ಲು, ಹೂ, ಹಣ್ಣು, ಎಲೆಗಳು ಇರಬಲ್ಲುವು. ಹಾಗೆ ಸ್ಥಿರವಾಗಿ ನಿಂತಿರಬೇಕಾದರೆ ಅದಕ್ಕೆ ಆಧಾರವಾವುದು ? ಅದೇ ತಾಯಿಬೇರು. ಕಾವ್ಯವು ವೃಕ್ಷವಾದರೆ ಅದರ ತಾಯಿಬೇರು ವಾಗ್ದೇವಿಯು. ತಾಯಿ ಬೇರು ಹೊರಗೆ ಕಾಣುವಂತಹದಲ್ಲ. ಅದು ನೆಲದ ಆಳದಲ್ಲಿ ಹುದುಗಿದ್ದು ಕವಲುಕವಲುಗಳಾಗಿ ಹರಡಿ ನೆಲದ ಸಾರ-ಸತ್ವವನ್ನು ಹೀರಿ ಮರಕ್ಕೆ ಕೊಡುವುದು. ಅದರಂತೆ ವಾಗ್ದೇವಿಯು ಕಾವ್ಯಕ್ಕೆ ಆಧಾರವಾಗಿದ್ದು, ಅದನ್ನು ಹೃಷ್ಟವೂ ಪುಷ್ಟವೂ ಆಗುವಂತೆ ಮಾಡುವಳು. ಆಕೆಯೊಲುಮೆಯಿಂದಲೇ ಕವಿ-ಕರ್ಮ ಕಾವ್ಯವಾಗಬಲ್ಲುದು, ಲೋಕದ ಜನಸಾಮಾನ್ಯರನ್ನೂ ವಿದ್ವಾಂಸರನ್ನೂ ರಂಜಿಸಬಲ್ಲುದು.



ಓಂ ಶುಭಮಸ್ತು

# ಸತ್ವಾಲೋಕನಂ ಎಂಬ ವಸ್ತುಕ ಕಾವ್ಯಂ

## ಪ್ರಥಮಾಶ್ವಾಸಂ

(ಶಾರ್ದೂಲವಿಕ್ರೀಡಿತವೃತ್ತ)

ಶ್ರೀದೇವೀರಮಣಂ ವಿನೋದಕರಣಂ ಧರ್ಮಾನುಕೂಲಾತ್ಮಸ
ದ್ಬೋಧಪ್ರಾಯಗುಣಂ ಮನೋಜ್ಞಸುಮುಖಂ ಚಾತುರ್ಮುಖೋ
ದ್ಗೀತದಿ ||
ವ್ಯೋದಂತಂ ರಣರಂಗಪಂಚವದನಂ ದೋಷಪ್ರಣಾಶಂ ಸದಾ
ಹ್ಲಾದಂ ರಕ್ಷಿಸುಗೊಪ್ಪನಿತ್ತು ತಿರೆಯೊಳ್ ಶ್ರೀಶಂಕರಂ ಲೆಂಕರಂ ||೧||

ಈಶಂ ಮೃತ್ಯುವಿನಾಶಿ ತಾತನಿರೆಯುಂ ಪೂರ್ವಸ್ತುತಂ ಸರ್ವವಿ
ಘ್ನೇಶಂ ರಾಜಿಪವಾರಣೇಂದ್ರಮುಖನಾಗಿರ್ದುಂ ವಿವೇಕಾತಿಪಂ ||
ಕಾಶಂ ಮೂಷಕವಾಹನಂ ಫಣಿಧರಂ ಲಂಬೋದರಂದಾಳ್ದು ಸ
ರ್ವಾಶಾವ್ಯಾಪಿ ಗಣೇಶನಾದನೊಸೆದಾದಂ ಮಾಳ್ಕೆ ನಿರ್ವಿಘ್ನಮಂ ||೨||

ವಿಧಿಮುಖ್ಯಾಮರಸೇವಿತಂ ಶ್ರುತಿನುತಂ ಭಕ್ತಾರ್ತಿನಿಶ್ಶೇಷತಾ
ವಿಧಿಪೂರ್ಣಂ ವಿಮಲಂ ಶಿವಂ ಸಕಲಗಂ ಸರ್ವಾರ್ಥದಂ ನ್ಯಾಯಪಂ ||
ಪದನಜ್ಞಾನನಿವಾರಣಂ ಪರಮಭಕ್ತಿಜ್ಞಾನದಾನಂ ಭವಾಂ
ಬುಧಿಪಾರಾಯಣನೀಗಭೀಷ್ಟಫಲಮಂ ಶ್ರೀ ಸತ್ಯನಾರಾಯಣಂ ||೩||

ಗಣಿಯೊಳ್ ಮಾಣಿಕದಂತೆಯುಳ್ತನೆಲನೊಳ್ ಪೈರಂತೆ ವಾರಾಶಿಯೊಳ್
ಮಣಿಯಂತಂಬುಜದಂತೆಯಬ್ಜವನದೊಳ್ ಶುದ್ಧಾನ್ನದೊಳ್ ಸತ್ವಸ ||
ದ್ಗುಣದಂತತ್ಯಧಿಕಪ್ರಭಾವಯುತನಿರ್ದೀ ಕಾವ್ಯದೊಳ್ ಯುಕ್ತಸ
ದ್ಗುಣಮಂ ಪಾಲಿಕೆ ಸರ್ವವೇಷನಗಜೇಶಾ ಭಕ್ತಪೋಷಂ ಸದಾ ||೪||

ಬುಧಜಾಲಸ್ತುತನಾಗಿ ದಿವ್ಯ ನಿಜಲೀಲಾನಾಟ್ಯದಿಂ ಭಕ್ತಸಂ
ಪದಶೇಷಪ್ರದನಾಗಿ ಸರ್ವಜಗದುತ್ಪತ್ತಿಸ್ಥಿತಿಧ್ವಂಸಕಾ ||
ರ್ಯದೆ ತನ್ನೊಪ್ಪುವ ಹಾವಭಾವಯುತನಾದಾ ರುದ್ರದೇವಂ ಸ್ವಚಿ
ತ್ರದ ರಂಗಸ್ಥಿತನಿರ್ಕೆ ಪಾಲಿಸುಗೆ ಸುಸ್ಥೈರ್ಯಂ ಪದನ್ಯಾಸದೊಳ್ ||೫||

ಕತೆಗೆಲ್ ಭಾವಮುಲರ್ ಸದರ್ಥಮೆಫಲಂ ಶಬ್ದಂ ಕುಕಿಲ್ ಛಂದನು
ನ್ವಿತಪರ್ಣಂ ರಸಜೀವನಾಗೆ ಪುರುಡೆಂಬಾ ಮಾರುತಾಘಾತದಿಂ ||
ಕೃತಿಭೂಜಂ ಕೆಡೆಬೀಳದಂತೆ ತಳೆವಾ ತಾಯ್ವೇರವೋಲ್ ದೇವಿವಾ
ಕ್ಸತಿ ಮತ್ಕಾವ್ಯವನಾಂತು ರಂಜಿಸುಗೆ ವಿದ್ಯಾಲೋಕಮಂ ಲೋಕಮಂ||೬||

ಕಂದ||

ಲಕ್ಕಣಮಂ ಕಿಡಿಸದೆ ಪಿಂ
ತಿಕ್ಕದೆ ಸನ್ಮಾರ್ಗಗತಿಯ ಪುರುಳಂ ಪಿರಿದುಂ ||
ಲಕ್ಕಿಸಿ ಕಬ್ಬಂಬೇಳ್ವರ್
ತಕ್ಕಿನ ಕವಿರಾಜರೆನ್ನ ಸನ್ನುತಿಭಾಜರ್ || ||೭||

ಸನ್ನುತರೆನಿಸಿದ ಪೂರ್ವಜ
ರೆನ್ನೋದಿಕೆಗಿಂತು ನೆಗಳ್ದ* ಮತಿಗಂ ಕೃತಿಗಂ ||
ರನ್ನದ ಕೈದೀವಿಗೆಯಾ
ದನ್ನರ್ ಸದ್ಭಕ್ತಿಯಿಂದಮವರಂ ನೆನೆವೆಂ || ||೮||

ಧೀರರುದಾರರ್ ವಾಗ್ಗಂ
ಭೀರೆರ್ ನಾನಾಕಳಾಪ್ರಸಾರ ವಿಹಾರರ್ ||
ಚಾರುಗುಣಧಾರರೀರ್ಷ್ಯಾ
ದೂರರ್ ಸತತಂ ಬುಧರ್ಕಳೆಂದರಿದಿರ್ಪೆಂ || ||೯||

ಪಳಗನ್ನಡಮನೆ ಕಬ್ಬದೆ
ಬಳಸುವರೀ ಚಂಪು ತೆರಳ್ವ* ಕಾಲರಥಾಂಗ ||
ಕ್ಕೊಳಗಾಗಿ ಮುಂದೆ ಬಂದುದು
ಪಳತಲ್ತಿದರಲ್ಲಿ ಪೊಸತನರಿವವರರಿವರ್ || ||೧೦||

ಎಲ್ಲುಂ ನಿರುಗೆಯೊಳಿದರೊಳ್
ಸಲ್ಲದ ಕುಂದಿರ್ದೊಡಂ ಪ್ರಸನ್ನತೆಯಿಂದಂ ||
ಬಲ್ಲವರಂದದೆ ತಿರ್ದುಗೆ
ಸಲ್ಲಲಿತ ಗುಣಾಂತರಂಗ ಶರನಿಧಿ ಸೋಮರ್ ||೧೧||

ಪ್ರಸ್ತುತ ಸತ್ವಾಲೋಕನ
ವಸ್ತುಕಮೀ ಕಾವ್ಯಮಿದಕೆ ಹರಿನರ ಸಮರಂ ||
ವಸ್ತುವಿದಂ ಸಜ್ಜನಪದ
ಮಸ್ತಕನೊವಜಂ ಕನೀಯ ಕೇಶವನೊರೆದಂ ||೧೨||

(ಉತ್ಪಮಾಲಾವೃತ್ತ)

ಆರ್ಜವ ಶೌರ್ಯದಿಂ ಮೆರೆದು ಸಖ್ಯದೆ ಕೂಡಿ ಸುಕೃತ್ಯದಿಂದೆ ಧ
ರ್ಮೋರ್ಜಿತ ಕಾರ್ಯಮಂ ನೆಗಳ್ದು* ಸತ್ಯವಚಃ ಪರಿಪಾಲನಾ ಸುಕೀ ||
ರ್ತ್ಯಾರ್ಜನೆಯಿಂದೆ ಲೋಕಕೆ ಸದಧ್ವವನಿಂತುಟಿನುತ್ತೆ ತೋರ್ಪ ಕೃ
ಷ್ಣಾರ್ಜುನರಾರ್ಯ ಚರ್ಯೆಯನೆ ಕಬ್ಬದೊಳಂಶವನೆತ್ತಿ ಬಣ್ಣಿಪೆಂ ||೧೩

ಗದ್ಯ ||

ಮತ್ತಮಿಾ ಸತ್ವಾಲೋಕನ ಕಾವ್ಯದ ವಿಸ್ತಾರಮೆಂತೆಂದೊಡೆ–

ಕೀಲಾಲಕ್ರೋಡ ಘೋರಾಕೃತ ಮಕರ ಗಜಾಕೀರ್ಣಮಾವರ್ತಗರ್ತಾಂ
ದೋಲೋತ್ಪಾತಂ ಗಭೀರಂ ಗಿರಿಸಿಭ ವಿಚಲದ್ಭಂಗ ಸಂಘಾನ್ವಿತಂ ಪ್ರಾ ||
ವಾಲಸ್ಥಂ ಮತ್ಸ್ಯವಾಸಂ ಘನಘನನಿನದಂ ಶಂಖಶುಕ್ತ್ಯಾಳಿ ರಂಗ
ತ್ಕೂಲಂ ರತ್ನಾಕರಂ ದುಸ್ತರತರಮೆಸೆಗುಂ ಪಶ್ಚಿಮಾಂಭೋ
ನಿಧಾನಂ ||೧೪||

ವಿಳಸನ್ಮೌಕ್ತಿಕ ಚಾರುಶೀಕರಯುತಂ ಹೇಮಂತಶ್ಶೈಲೀ ಹಿಮಾ
ವಳೀಸಂಸ್ಪರ್ಧಿತ ಗೌರವರ್ಣ ಬಹುಡಿಂಡೀರಾವೃತಂ ಬಾಡಬಾ ||
ನಳಧೂಮಾವಳಿ ಸಂಶಯಪ್ರದ ಪಯೋದವ್ಯೂಹಯುಕ್ತಂ ತಿಮಿಂ
ಗಿಳದುಜ್ಜೃಂಭಣ ಮೇದಿನೀವಿಳಯ ಘೋಷಕ್ಕಾಗರಂ ಸಾಗರಂ ||೧೫||

ಸುರುಚಿರಮಾಗಿ ಪೆರ್ಚಿ ಬೆಳೆದಿರ್ಪನಿಲದ್ರುಮ ವಾಯು ಘೋಷಮಾ
ಕರನಿಧಿಯುತ್ತರಂಗರವ ಮೋಡುವ ಕೂಗಿನ ನೀಳ್ದ ದೂವೆದೇ ||
ರುರುನಿನದಂಗಳಂ ಬೆರೆತ ಕೊತ್ತಳಿಕೂಗಿನ ಕರ್ಕಶತ್ವದಿಂ
ಕಳಕರೆಗೊಂಬರಾಗತಜನರ್ ಕಿವುಡೊಂದಿದೆವೆಂದು ತೀರದೊಳ್ ||೧೬||

ಕಂದ || ಉಡುಪಂಗಳಿಂದೆ ದಾಸರ್
ಕಡಲೊಳೆ ಪೋಗುತ್ತಡೊಂದು ದೀವಿಯೊಳಿಳುತುಂ ||
ಅಡಲೊಡರಿಸಿದೊಡೆ ಸುಡೆ ಬೆ
ನ್ನೊಡನಾಳಿಸಿ ತಗುರ್ಗುಂ ತಿಮಿಂಗಿಳಮುದರೊಳ್ ||೧೭||

ವನಖಡ್ಗದ ನಿಡುಗೋಡೆನೆ
ವನಯಾನದ ಕಂಬಮೆಸೆಯೆ ನೊಣೆದೊಡೆ ನಕ್ರಂ ||
ಮನದೊಳ್ ಭಾವಿಸಿ ಪಡಗಕೆ
ಜನರಾ ಕೀಳ್ಕೆಯ್ಗ ಕಟ್ಟುಗುಂ ಕರಗಸಮಂ ||೧೮||

ಅಂಬುಧಿಯಂ ಶೋಷಿಸಲುಂ
ಕುಂಭಿಣಿಯಂ ಲಯಿಸಲುಂ ಸಮರ್ಥಂ ದ್ಯುತಿಸಂ ||
ರಂಭಂ ಜ್ಞಾನಾತ್ಮದ್ಯುತಿ
ಯೆಂಬಿನನಮಂಬುಧಿಯೊಳೊಂದು ಕಿರ್ಚುಂಟೆಂಬರ್||೧೯||

ಗಂಭೀರತೆಯಿಂ ತನ್ನೊಳೆ
ಜೃಂಭಿಪುದಲ್ಲದೆಯೆ ಮೆರೆಯಿಪೆಂ ಶೌರ್ಯವನೆಂ
ದಂಬುಧಿ ಮೇರೆಯ ಮೀರಂದು
ಗಂಭೀರತೆಯನ್ನೆಯಕ್ಕೆ ದೊರೆಯೆನಿಸುಗುಮೇ ||೨೦||

ದೇಶಕ್ಕೆ ಯೋಗ್ಯಕಾಲದೆ
ತೋಷದ ಮಳೆಯಿಾಗುಮಲ್ತೆ ಮೇಘಂ ಕಾಲಾ
ಶೇಷಮುದಕುದಕಮಂ ಕುಡು
ವೀಸುಗುಣಕ್ಕಾವನುಂ ಸಮಂ ಬಂದಪನೇ ||೨೧||

ವೃತ್ತ ||
ರಕ್ಷಿತಜೀವಸಂತತಿ ವಿಚಾರಯುತಂ ಮಣಿಭೂಷಿತಂ ವಿನಾ
ಲಕ್ಷಿತವೈರಿ ಫೇನಯಶಸಂ ದ್ವಿಜವೃಂದವಿವೃದ್ಧಸೇವನಂ ||
ಪಕ್ಷಧರಾವನೀಧರ ಭಯಾಪಹರಂ ಸುಕಲಾಧ್ರಕರ್ಷನಂ
ಶಕ್ಷಯುರಾಗಭಾಜನೆಸೆಗುಂ ಧರಣೀಪತಿಯಂತೆ ಸಾಗರಂ ||೨೨||

(ಮುಕ್ತಪದ ಗ್ರಹಣಗದ್ಯ)

ಮತ್ತಂ ವಿನತಾತನೂಜಂ ಪತತ್ರಿರಾಜಂ ಸಾಜಮಪ್ಪ ವೈರದಿಂ ಮರಗ - ಪರಿವಾರ – ಸಂಹಾರಂ ಗೆಯ್ದಾಹಾರಂ ಗೆಯ್ವುದುಂ ಮರೆವೊಕ್ಕವಂ ಕೊಲ್ವುದರನಲ್ಲದುದರಿಂ ಕೊಲಲಾರನಾಗಿ ನಿರಾ

ಹಾರಿಯಾದನೆಂದರಿತು ವಿಭುಹಿತಾರ್ಥಂ ಪಾರಿ ಸೆಲನೊಳ್ ದೊರೆ ಕೊಂಡ ಕೊಳ್ಳಿಯಿಂ ತಣಿಯದೆ ಜಲಧಿಯೊಳರಸಲ್ ಬರ್ಪುವೆನಿಸಿ ಪಾರಾಡುವ ಪಕ್ಷಿನಿಕಾಯದಿಂ– ಆ ಪಕ್ಷಿಕಾಯಂ ತನ್ನ ಸೇವೆಗೆಯ್ದು ಪುದುಗೆತ್ತದರ್ಕೆ ಕರ್ದುಂ* ಕಲಕ್ಕಿಗಾಳ್ಗಳಂ ಸಮುದ್ರರಾಜಂ ಪಾರಿ ಸುವನೆನಿಸಿ ಸಿಡಿಯುತ್ತಿರ್ಪ ಸೀವರಂಗಳಿಂದೆಯುಂ–ಆ ಸೀವರಂ ಗಳ್ ವನಧಿ-ಮುದ್ರಿತ-ಧಾತ್ರೀ-ದೇವೀ-ಪೂಜಾ-ಪುಷ್ಪಾಂಜಲಿಕ್ಷೇಪ ಮಾಗೆ, ಕೆಮ್ಮಿನ್ ದೀಪಾಂಕುರಮಾಗೆ, ಸಮುದ್ರಘೂರ್ಣನಮೆಂಬ ದೆಸೆವಳರ ವಾದ್ಯಧ್ವನಿಯಿಂದೆಯುಂ– ಆ ವಾದ್ಯಧ್ವನಿ- ಶ್ರವಣ - ಪಲಾಯಮಾನ-ಜನಜೀವನ ಮಾರುತನಂ ಮಾರುತನಂ ತಡೆದು ಸಂತೆ ಯಿಪಂತೆ ಮಿಳಿರ್ವ ನಾವೆಯ ಕೂವೆಗಂಬದ ಬೆಳ್ವಳಿಯಿಂದೆಯುಂ– ಆ ಬೆಳ್ವಳಿಯುಂ ಸ್ವವೇಗಭಂಗ ಕೋಪದಿಂ ಸಖನಪ್ಪ ಸರ್ವದಹನಂಗೆ ಬಡಬಾನಲಂಗೆ ಕುಡುವೆನೆಂದಾರ್ಪಿನಿಂ ಚಲಿಸುವ ಚಂಡಾನಿಲ ನಿಂದೆಯುಂ– ಆ ಚಂಡಾನಿಲನ ಬಿರುವೊಯ್ಲಿಂ ನೊಂದು ಕನಲ್ದು "ಮರುತ್ಪಥಮುಂ ಮಾರುತಂಗಂ ದುಷ್ಪ್ರವೇಶ್ಯಂ" ಮಾಳ್ಪೆನೆಂ ದೇಳ್ವ ಪೆರ್ದೆರೆಯಿಂದೆಯುಂ – ಆ ಪೆರ್ದೆರೆಯುರೆ ಚಣದೊಳೆ ಮಾಯುವಪ್ಪುದರಿಂ ಭವಸಾಗರ – ಸುಖ ಜೀವನ – ಭಂಗುರತೆಯಂ ನಿದರ್ಶಿಪ ನೀತಿಯಿನಾದಮೊಪ್ಪುಗುಂ- ಅಂತು ಪೆಂಪು ಗುಂಪುವಡೆದಾ ಪಡುವಣ ಪೆರ್ಗಡಲೊಳ್–

ಕಂದ||
ಆ ನೀರನಿಧಿಯ ರಾಜಾ
ಸ್ಥಾನಂ ತೆಂಕಿದುದೊ ವಿಮಳ ವೈಕುಂಠಪುರಂ ||
ಸ್ನಾನಕ್ಕೆ ಬಂದುದೋ ಎನೆ
ತಾನೆಸೆಗುಂ ಪುಣ್ಯನಗರಮಾ ದ್ವಾರಕೆಯಾ ||೩||

ಪಸರಂಗಳ ಪೆಸರೋದುತೆ
ಪಸರಾಣ್ಮರ ಕುರುಪ ನೀಕ್ಷಿಸುತ್ತಮದೆತ್ತಂ ||
ಶ್ವಸನಂ ನಿಜಕರ್ತವ್ಯಂ
ಕುಸಿಯದವೋಲ್ ಮಂದವಾಗಿ ತೀಡುತ್ತಿರ್ಪಂ ||೨೪||

ಮಾರ್ಗದೆ ಮುಂಬರಿಯುತೆ ಪಿಂ
ಮಾರ್ಗ್ಗೆತರುತುಂ ಸುಶಬ್ದಯುತನೆಡೆಯರಿಯ ||
ತ್ಸ್ರಾಗ್ಗೆ ಹಿತಂ ಮರುತಂ ಕವಿ
ಮಾರ್ಗವನೆಂತಂತು ಮಾರ್ಗಮಂ ಪೂಸೆಯಿಸುವಂ ||೨೫||

ಆಮು ಮುನ್ನಂ ರಾಜನೀತಿಪ್ರವಣನೆನಿಪ ಗೋವಿಂದನಿಂದಾದುದಾ ನಾ
ಗಧನತ್ಯಾಚಾರದಿಂ ಸಜ್ಜನರನುಳಿಸಿ ಸಚ್ಛಕ್ತಿಸಂವರ್ಧನಂ ಗೈ ||
ವುದಕಿನ್ನಾ ಧರ್ಮಸಿಂಹಾಸನವನಿರಿಸಲೀ ಕ್ಷೋಣಿಯೊಳ್ ಯುಕ್ತಕಾರ್ಯಾ
ಸ್ಪದವಾಗಿರ್ದತ್ತು ಪುಣ್ಯಸ್ಥಳಮೆನಿಸಿಯೆ ರಾರಾಜಿಸುತ್ತಿರ್ಪುದಸ್ತೀ ||೨೬||

ಗದ್ಯ॥ ಮತ್ತಮದು ಹೇಷಾರುತ ಹಯಶಾಲೆಗಳಿಂ ಬೃಂಹಿತ ಶುಂಡಾಲ-ಬಂಧನ ಮಂದಿರಗಳಿಂ, ವಿವಿಧ ಶಬ್ದಜ್ಞಾನಯುತ-ಮೃಗಯಾ-ನಿಪುಣ-ಶುನಕಶಾಲೆಗಳಿಂ, ಪ್ರದರ್ಶನಾರ್ಥ ಗ್ರಥಿತ ವಿವಿಧ-ಮೃಗಾಲಯಂಗಳಿಂ- ಕೋಕಿಲರವ ಸ್ಪರ್ಧಿ-ತಿರಸ್ಕೃತ ವಿಪಂಚಿಕಾ-ಸ್ವನತೆಯರಪ್ಪ ಕಾಮಿನಿಯರಿಂ, ಸ್ವಜನ್ಮ-ಕರ್ಮಾನುಯೋಗೋದ್ಯೋಗ-ಕುಶಲ-ಮಾನವ ಸಾಮಾನ್ಯರಿಂ, ಕ್ರೀಡಾಲೋಲ ಬಾಲಕ ಜಾಲತದಿಂ, ದಿವ್ಯ ವೇದಮಂತ್ರ-ಪ್ರಯೋಗಾನುಮಿತ-ಧರ್ಮ ಕರ್ಮಮಾರ್ಗ-ಸ್ವತಂತ್ರನಿಯಂತಾರರಪ್ಪ ವಿಪ್ರಸಂತತಿಯಿಂ ಚೆಲ್ವಾಗಿ ಚತುರಸ್ರ ದ್ವಾರಕಾಂತಮಪ್ಪಾ ಪತ್ತನಂ ದಿವ್ಯಮಹಿಮೆಯಿಂ ಜನ ಮನದಾಪತ್ತನಂ ಜಿಸುತೆ ರಂಜಿಸುಗುಮಲ್ಲಿ

ನೈವಧೂಪಾಗರು ಧೂಮ ಗಂಧ ಹತ ದಿಕ್ಪಾಳಿ ದುರ್ಗಂಧ ಮೊ
ತ್ತುವ-ತೂರ್ಯಸ್ವನ-ನಷ್ಟ- ದುಷ್ಟವಚನ-ಶ್ರಾವ-ಪ್ರದೋಷಂ ಭವ
ಸ್ತವ ಮಂತ್ರಾನುಗಮಾನುರಾಗ ರಸ-ವಿಧ್ವಸ್ತಾಶುಭಂ ಸರ್ವ ಮಾ
ತ್ರವ-ಸರ್ವೇಷ್ಟದಮಾಗೆ ದೇವನಿಲಯಂಗಳ್ ನಾಡೆ ರಾರಾಜಿಕುಂ ||೨೭||

ನಿತ್ಯವಿಶೇಷಪೂಜೆ ನಿಯಮೋತ್ಸವ ಮರ್ಚಣೆ ಹೋಮ ದಾನ ಸತ್
ಕೃತ್ಯಮುದಾತ್ತ ಧರ್ಮಸಭೆಯುಂ ನಿಗಮಾಗಮಗೋಷ್ಠಿ ಸೇವೆ ಸಾ ||
ಹಿತ್ಯದ ತಾಳಮದ್ದಳೆಯ ಗಾನದ ವಾಚನ-ಕೀರ್ತನಾದಿಯಾ
ಸತ್ಕೃತಿಯಾಗಿ ದೇಗುಲದೊಳಲ್ಲಿ ಸಮಾಜಹಿತಾರ್ಥಸಂಕುಳಂ ||೨೮||

ಒಸೆಯೊಳ್ ಮಂಗಳಗೀತ-ವಾದ್ಯ-ವರಘಂಟಾನಾದ ಮಲ್ಲಿಂ ಪ್ರಸಾ
ರಿಸಲೆಚ್ಚತ್ತಖಿಳರ್ ಹರಿಸ್ಮರಣೆಯಂ ಶೌಚಾದಿಯಂ ಸ್ನಾನಮುಂ ||
ಭಸಿತಾಲೇಪನ-ಸಂಧ್ಯೆಯಂ ವಿನುತ-ವೇದಾಭ್ಯಾಸ ಪಾಠಂಗಳಂ
ಪೊಸಮೆಚ್ಚಿಂ ತಳೆಯಲ್ಕದೇಂ ಪಿರಿದೊ ತಾತ್ಪರ್ಯಂ
ಸದಾಚಾರದೊಳ್ ||೨೯||

ವೇದವನೋದುಗುಂ ಶಿವಕಥಾವಳಿಯಂ ಸಲೆಕಲ್ತು ವಿಷ್ಣುಪೂ
ಜಾದಿಯನೊಪ್ಪದಿಂ ನೆಗಳ್ದು*ಮುತ್ತಮ ನೀತಿಯನಾಲಿಕುಂ ವಿಪು ||
ದ್ಘೋದಿತ-ಮಾರ್ಗವರ್ತಿಯೆನಿಕುಂ ಸುಪುರಾಣಮನೊಲ್ದುವೈತಿಹಾ
ಸಾದರ ಯುಕ್ತಮುಕ್ಕುಮವನೀಬುಧ-ಸಂತತಿಯಗ್ರಹಾರದೊಳ್ ||೩೦||

ಮೆರೆಗುಂ ಕೊಳೆಯೊಳಸಹ್ಯಾ
ಪರಿಶುದ್ಧಿಯೊಳೆಯ್ದೆ ಪೊಲೆತನಂ ಮೈಲಿಗೆಯಾ
ಚರಣೆಯದು ವರ್ಣಜಾತಿಯ
ಕುರುಪಲ್ಲಂ ಶುದ್ಧಿಯಿರ್ದೊಡದೆ ಮಡಿಯುವರೊಳ್ ||೩೧||

(ಮಹಾಸ್ರಗ್ಧರೆ)

ಭವನಂ ವ್ಯೋಮಕ್ಕೆನೀಳಂ ಪುರವಿಪುಳಯಶಂ ಮೇರುವಿಂ
ನೀಳಮೇಗಳ್
ಸುವಿಲಾಸಂ ಭೂಷ್ಯಭಾವಂ ಜಗದೊಳಖಿಳ ಸೌಜನ್ಯದಿಂ ನೀಳಮಾದ ||
ತ್ತುವಿವೇಕಂ ಮುಕ್ತಿರಾಜ್ಯಸ್ಥಿತಿವರೆಗಿರೆ ನೀಳಂ ಪುರಂ ವರ್ಣನಕ್ಕಾ
ಗೆ ವಿನೀಳಂ ನೀಳಗಾತ್ರಂ ತ್ರಿಜಗದ ಜನಮುಂ ರಕ್ಷಿಪಂ
ವಾಸುದೇವಂ ||೩೨||

(ಶಾ. ವಿ.)

ದೇವ ಕಾಯೆನುತೆಯ್ದೆವಂದು ಮರೆವೊಕ್ಕರ್ಗಂ ನಿರಾತಂಕವ
ಸ್ಥೋವೃತ್ತೀಯುತು ಮುಕ್ತಿನಿಂದ ಪಗೆಗಿರ್ಚಂ ಕರ್ಚುತುಂ ಧರ್ಮದಿಂ ||
ತೀವುತ್ತುಂ ಜಗಮುಂ ಸ್ವಭೋಗರಹಿತ-ಸ್ವಾಮಿತ್ವಮುಂ ತಾಳುತುಂ
'ನಾವಿಷ್ಣುಃ ಪೃಥಿವೀಪತಿಃ' ಎನಿಸುಗುಂ ಶ್ರೀ ದೇವಕೀನಂದನಂ ||೩೩||

ಎಂಬಲ್ಲಿಗೆ ಸತ್ವಾಲೋಕನ ಕಾವ್ಯದೊಳ್
ದ್ವಾರಕಾವರ್ಣನಂ
ಪ್ರಥಮಾಶ್ವಾಸಂ



# ವನವಿಹಾರವರ್ಣನಂ

## ದ್ವಿತೀಯಾಶ್ವಾಸಂ

ಕಂದ ||　ಶ್ರೀಮದ್ಯದುವಂಶಾಂಬುಧಿ
ಸೋಮಂ ಸದ್ಧರ್ಮಬೀಜನವನೀ-ಶಾಂತಿ ||
ಪ್ರೇಮಂ ಸದ್ಗುಣಗಣ-ನಿ
ಸ್ಸೀಮಂ ಶ್ರೀಕೃಷ್ಣದೇವನಸಮ-ಪ್ರತಿಮಂ ||೧||

ರವಿಶಶಿಪಾವಕಾಕೃತಿಯನಾಂತುದು ಕೃಷ್ಣನ ಘೋರ ಶೌರ್ಯರೋ
ಚಿವಿತತಿ ದುಷ್ಟವೈರಿ ಕುಮುದಾಂಬುಜ-ಕಾನನ ಕೆಂದೆನಲ್ ಸುರಾ ||
ಪವಿಮಳ ತೇಜಮುಂ ಸುಡದೆ ಕೋಡದೆ ಪೊತ್ತದೆ ಕಾಂತಿಬೀರುವಾ
ರವಿಶಶಿ ಪಾವಕಾಕೃತಿಯದೆಂಬಿನ ಮೊಪ್ಪಿದನೇಂ ಮಹಾತ್ಮನೋ ||೨||

ರಿಪುದೈತ್ಯಾನೀಕಮಂ ಬೆಂಬಿಡಿದು ಬಡಿಸುತೀಡಾಡುಗುಂ ವೈರಿಹೃತ್ತಂ
ವಿಪುಳಂ ಕೋಳ್ಗುಟ್ಟಿಕುಂ ಕುಂಕುಮ-ತಿಲಕವನಾ ಭಾಮಿನೀ ವಕ್ತ್ರದಿಂಕಿ||
ತ್ತಪಹಾರಂ ಮಾಡುಗುಂ ಮೇಣತುಳ-ಧನವ ಕೈಸಾರ್ಚುಗುಂ
ಸಂತರಂ ಸೇ
ವಿಪ ಸಾಧುವ್ರಾತಮಂ ಸಂತಯಿಪ ಸಃಗುಣದಿಂ
ಕೃಷ್ಣದೇವಪ್ರಭಾವಂ ||೩||

ಕಂದ ||　ನಾಗನ ಸಂತಯಿಕುಂ ದಿ
ಙ್ನಾಗಂಗಳ ತಣಿಸಿಯಾವೆಬೆನ್ನೊತ್ತಿಗಳಂ ||
ಬೇಗಂ ಸಡಿಲಿಪಿ ನಾಕದ
ಲೋಗರುಮನುಂ ಹರಿಸವಡಿಕುಮನನ ಪ್ರಭಾವಂ ||೪||

ವಸುಧಾಭಾರವನಿಳಿಸೆ ಗಿ
ರಿಸನಾಣತಿವಡೆದು ಪುಟ್ಟಿಯೀ ಹರಿ ದುರುಳ ||
ಪ್ರಸರವನಳಿಸುವನೆನುತುಂ
ನಿಸದಂ ಪೇಳ್ವಲ್ಲಿ ಸಂದೆಯುಂ ಬಂದುಪುದೇ ||೫||

ಮುಳಿಸಿನ ಮಾತು ನೀರಬರೆಪಂ ಪುಸಿ-ಮೋಸದ ಕಾಡು ವಹ್ನಿಸಂ
ಮಿಳಿತಮಯೋಗ್ಯತಾ-ನಳಿನಪಿಂದು ಕರಾನ್ವಿತಮಂಡ್ಡ ಕೊಯ್ದುದಾ ||
ಕಳವಿನ ದಾಂಟುವಳ್ಳಿ ರುಜೆಯೆಂಬಿರುಳರ್ಕನಿದಿರ್ ವಿವಾದದಾ
ಕುಳಗೃಹಕಭ್ರಮೇ ನೆಲೆಯೆನಲ್ ನೆಲನೊಪ್ಪಿತು ಶೌರಿಯಂಕೆಯಿಂ ||೬||

ಪ್ರಿಯಭಾವಂ ಪರಮೋಪಕಾರಮರಿರಾಹಿತ್ಯಂ ಮನಸ್ಸಂಯಮಂ
ನಯವಾಕ್ಯಂ ಗುರುದೇವತಾನುರತಿಯುಂ ಜ್ಞಾನಂ ತಪಂ ಸತ್ಯಮುಂ ||
ದಯೆ ದಾನಂ ಧೃತಿ ಶುದ್ಧಿ ಶೌರ್ಯಗುಣಮಾತ್ಮೀಯತ್ವಮೆಂಬೀಗುಣೋ
ದಯದಿಂ ವರ್ಣಿತರಾಗಿ ಲೋಗರೆಸೆವರ್ ಮಹಾತ್ಮ್ಯದಿಂ ಕೃಷ್ಣನಾ||೭||

ಕಂದ|| ನಿಯಮಿತ ತೇಜೋ-ಮಾರ್ಗಸ
ಮಯದಿಂ ರವಿ ನಿತ್ಯವೃತ್ತನೆಂತಂತು ಪ್ರಜಾ ||
ಚಯಮೆಲ್ಲಂ ನಿತ್ಯನಿಯಮ
ನಿಯತರುಮಾಕಾಂಕ್ಷ-ಭಕ್ತಿ-ಮಾರ್ಗಾಕ್ರಾಂತರ್ ||೮||

ಪಕ್ಷವನಾನದವರ್ ಶಶಿ
ಪಕ್ಷಯುಗದೆ ಶುಕ್ಲಪಕ್ಷಮುದನನುಕರಿಸು ||
ತ್ತಕ್ಷಯಃ-ಕಳೆವಡೆಯುತೆ ತ
ತ್ಪಕ್ಷದೊಳಾ ಕೃಷ್ಣಪಕ್ಷಮಂ ಪಿಡಿದೆಸೆವರ್ ||೯||

ಹದಿಬದೆ ಪೆಣ್ ಸಂಯತ ಚಿ
ತ್ತದಂ ಪುರುಷನುತ್ತಮೌಜಸಂ ಜನಮಾನ್ಯಂ ||
ಮುದದಂ ಬಾಲಂ ಗುರುಜನ
ವಿಧೇಯನುಂ ದೇಶಭಕ್ತನಿರ್ಕುಂ ಕುವರಂ ||೧೦||

ಇಳೆಗಭಿನುತಮೆನೆ ಸುಗುಣಾ
ವಳಿಯುಂ ಕೃಷ್ಣಪ್ರಜಾಜನವನೇ ಸಾಗ್ರ್ಯಂ ||
ಜಳಧಿಯ ಜಳಮೆನಿತಿರೆಯುಂ
ತಿಳಿಗೊಳನೊಳೆ ಬೆಳೆವುದಲ್ತೆ ಸಲೆನಳಿನಕುಳಂ ||೧೧||

ಬತ್ತದು ಕೆರೆ ಪೊತ್ತದು ಮನೆ
ಬತ್ತದ ತೆನೆ ಮುತ್ತದೆತ್ತಲಾದೊಡಮೆಂದುಂ ||
ಕುತ್ತಂ ತಲೆಯೆತ್ತದೆನಲ್
ಮತ್ತಿನ ನಾಡಿಂತುಟಲ್ತೆನಲ್ ನಾಡೆಸಗುಂ ||೧೨||

(ಚಂಪಕಮಾಲಾವೃತ್ತ)

ಪಥವಿಡಿದಲ್ಲಿಯಲ್ಲಿ ಪೊಸಬಾಳೆಯ ತೆಂಗಿನ ಕೌಂಗುದೋಂಟದಿಂ
ಪೃಥುಳಕುಜಾಳಿಯಿಂ ಕಿಸಲಯಾಳಿಯ ಸೋಬೆಯ ಕಾಪುಗಾಡಿನಿಂ ||
ಮಥಿಸಿದ ಚೆಲ್ವಿನಿಂದೆಸೆವ ವಾರಿಜಷಂಡದಿನೊಪ್ಪಿ ತೋರ್ಪ ಮ
ನ್ಮಥನ ಧನುರ್ವನಂಗಳಿನದೇಂ ಸೊಬಗೊಪ್ಪಿತೊ ನಾಡೆ ನಾಡಿನಾ ||೧೩||

ಗದ್ಯ || ಅಂತು ನಾಡುಂ ಬೀಡುಮೆಸೆದಿರೆ—ಆ ಚಕ್ರಿ ಅರಮ ವಿನೋದ ಭಾವೋದಯ ಶೀಲನಪ್ಪುದರಿಂ ವಿವಿಧ-ಪ್ರವಾಳ-ಪುಷ್ಪ ಫಳ - ಭಾರ - ಸಂಗತ - ತರುವೀರುತ್‌ಪ್ರಕರ-ಪರಿರಂಜಿತ-ನಂದನ ವನಂಗಳೊಳುಚಿತ - ಪರಿಮಿತ - ಸತೀನಿಚಯಯುತಂ ವಿಹರಿಪಂ - ಸರಸ-ವಿನಯ-ವಿದ್ವಜ್ಜನ ವಿಲಸಿತ-ಸಭಾ-ಮಧ್ಯದೊಳುರು-ರುಚಿರ- ವಚಃ ಕೌಶಲದಿಂದೆ ಪೋಸದೇಸೆಯ ನುಡಿಕಾರನೆನಿಪಂ-ಸುಜನ - ಹಿತ-ಕಾರ್ಯ-ಪರಂಪರಾ-ನಿರತತೆಯ ಲೀಲೆಯಿಂ ಲೋಕಕಲ್ಯಾಣ ಕಾರಕನೆನಿಪಂ- ಆಸನ್ನ- ಖಿನ್ನ-ಜನರಂ ಪರಿಪೂರ್ಣ ಮೈತ್ರಿಯಿಂ

ಸಂಭಾವಿಪುದರಿಂ ಕುಶಲಪ್ರಿಯನೆನಿಪಂ–ರಾಕ್ಷಸಶರೀರ–ಗಿರಿ–ಪ್ರಭೇದನ–ಪ್ರಬಲ– ಶಂಬಾಯುಧನೆನಿಸಿಖಳಾರಿಯೆನಿಪಂ– ಸ್ವಪ್ರತಿಜ್ಞಾ–ಪರಿಪಾಲನಾನುಕೂಲ–ಕಾರ್ಯೋನ್ನತ–ಜಯಭಾಮಿನೀ–ಸೇವಿತನಾಗಿ ಸತ್ಯವ್ರತನೆನಿಪಂ–ಮೇಣಾ ಶಾರ್ಙ್ಗಧನ್ವಂ– ಕೌಮೋದಕೀ ಗದಾಯುಧಂ– ಪಾಂಚಜನ್ಯಸ್ವನ– ಪ್ರಸಾರ–ಸಾರ ಪ್ರಪಂಚಂ– ವಿಸ್ತಾರ–ಕ್ಷೀರ–ಡಿಂಡೀರ–ಪಿಂಡ–ಪಾಂಡುರಯಶಂ ನಾರಾಯಣ ಶಿವಸ್ವರೂಪಂ ಜ್ಞಾನಾನಂದಮಯಂ–ಸಾಂಸಾರಿಕಾಕಾರಂ–ಪಂಚಪಾಂಡವ ಸ್ನೇಹಮಂಡಿತ–ಹೃನ್ಮಂಡಪಂ – ಪರಿಣೀತಾನೇಕ – ಪ್ರಮುದಾ–ಮುದಪ್ರದಂ ಬಲರಾಮಾಗ್ರ ಪ್ರತಿಷ್ಠಾನಿರತ ಸಹೋದರಂ–ಶ್ರೀಕೃಷ್ಣಂ ಸುದರ್ಶನಕರಂ ಸುದರ್ಶನಕರನಾಗಿ ದ್ವಾರಾವತೀ ರಾಜಧಾನಿಯೊಳ್ ವಿರಾಜಿಸುತಿರ್ಪನ್ನೆಗಂ–

ಮ|| ಸ್ರ||

ವನದೊಳ್ ಕೇಕೀಸ್ವನಂ ಪುಷ್ಪವಿತತಿಯೊಳಳಿನೀ ಪ್ರಸ್ವನಂ
ಕೋಕಿಲಾಳೀ
ನಿನದಂ ಚೂತಾವನೀಜಾವಳಿಯೊಳಚಲ ಸಾನ್ವಂತದೊಳ್ ಕಿನ್ನರೀಕಾ ||
ಮಿನಿಯುದ್ಗೀತಾರವಂ ಸಾರಸಕುಳಕಳ ಕೂಜದ್ರವಂ ನೀರಜಾತೋ
ದ್ವನದೊಳ್ ರಂಜಿಪ್ಪಿನಂ ರಂಜಿಸಿದುದತನುಸಂತೋಷವಂತಂ
ವಸಂತಂ ||೧೪||

ಅಣೆದೇಂ ತೀಡಿತೊ ಜೀವಸಂಕುಳ ಮಹೋಲ್ಲಾಸಪ್ರದಂ ನೇಹದಿಂ
ಪೂಣರ್ವಾಗಳ್ ಗೆಡೆವಕ್ಕಿಗಳ್ ಕೊಳನೊಳತ್ತಲ್ ಪೊಣ್ಮಿದಾ
ಸೂಕ್ಷ್ಮವಾಃ ||
ಕಣಮಂ ವಾರಿಯ ಶೀತಲತ್ವಗುಣಮಂ ಸಂತೋಷದಿಂ ಪೊತ್ತು ದ
ಕ್ಷಿಣದಿಂ ತಂದ ಸುಗಂಧ ಚಂದನದ ಕಂಪಂ ಮಾರುತಂ ಮಾರುತಂ||೧೫

ಕಂದ|| ಉತ್ತರ ಸತಿಯುಂ ರವಿಯುನು
ರಕ್ತತೆಯಿಂ ಸೇರೆ ಸೆಳೆಯೆ ತದ್ವಿತ ಸೇವ್ಯೋ
ದ್ಯುಕ್ತತೆ ತೆಂಕಣವೆಣ್ಗಿದು
ಬಿತ್ತರದಿಂ ಗಾಳಿತೀಟವಾಗಲಿ ಪೇಳ್ಕುಂ ||೧೬||

ನಳಿನಾಪ್ತಂ ಕಡುಗದಿರಂ
ತಳೆದಿರೆ ಕಡುಸೊಂಪುಗುಂದಿನಿಂ ನಳಿನಂ ನೀ ||
ರ್ಗೊಳದೊಳ್ ಮೆರೆಗುಂ ಪೊಸತೆನ
ಲಿಳೆಯೊಳ್ ಹದಿಬತೆಯ ದಮ್ಮವಿಂತಿರ್ದಪ್ಪೇಡಾ ||೧೭||

ಗದ್ಯ || ಮತ್ತಂ ತಣ್ಗದಿರಂಗೆ ಸೊದೆವೆಳಗಂ ಪೆರ್ಚಿಸಿ ಮತ್ತ ಚಕೋರಂಗಳ್ಗೆ ನಲ್ವಿರ್ದನಿಕ್ಕಿಯುಂ- ಸಪಕ್ಷಡಿನ ಜಡಜಾಪ್ತ-ದೀಪ್ತಿಯಿಂ ಪೊಮ್ಮೆಯ್ಯನಾಂತು ಸುತ್ತಿ ತಿರುಂಗಿ ರಯ್ಯನೆ ಪಾಡಿ ಬಂದರೆಮುಗುಳ ಕುಡಿಯನೊಡೆಯಿಸಿ ಪೂವುಡಿಯು ತಡೆಯಂ ಕಡೆ ಗಣಿಸಿ ನುರ್ಗುವ ಜೇಗುಂಡಿಗಗಡಣಕ್ಕೆ ಜಡಜದಲರೊಳ್ ಬಂಡಿನ ಬಂಡಾರಮನಿರಿಸಿಯುಂ ಮೂಗುವಡಿಕೆಯಂ ಬಿಟ್ಟು ಗಂಟಲೊಳ್ ನಲ್ಸರಂ ಬಟ್ಟು ರಾಗಮಾಲೆಗೆ ಕಯ್ಗೊಟ್ಟು ವುಗಲ್ ವುಗಲೆಂದು ಬಗ್ಗಿಸಲನುಗೆಯ್ವ ಕೋಗಿಲೆಗೆ ಮಾಮರನೊಳ್ ತಳಿರ್ಗಳುಮಂ ಪಣ್ಗಳುಮಂ ಪೆರ್ಚಿಸಿಯುಂ-ಕಾರ್ಗೆತ್ತರಂಕೆಗೆದರಿ ಕುಣಿಯಲ್ ನೆರೆವ ಸೋಗೆಗಳ್ಗೆ ಮರದಿಂ ಮರಂದದ ಸೋನೆಯಂ ಜಿನುಂ-ಗಿಸಿಯುಂ-ವಸಂತ ಸಖನ ಬೆಳ್ಜಸಮೆ ಪಕ್ಕಿಜುಗಮಾಯ್ತೆನೆ ಸೊಗಯಿಸಿ ಸೋಂಕುವ ಮರಾಳ ಮಿಥುನಕ್ಕೆ ಕಯ್ಗೆಯ್ದು ಬೆಳ್ದಾವರೆಯ ಸಜ್ಜೆಯನೇರ್ಪಡಿಸಿಯುಂ- ಹಂದದ ತವಸಿಂಗೊಳಗಾಗಿ ಯೋಗ ನಿರತರಾದ ಯೋಗಿಗಳ ಮನಸ್ಸೊಳಮಂ ಶೃಂಗಾರೋತ್ತೇಜಕ

ವಿಭಾವ ವಾಯುವಿಂ ಪಾರಿಸಿಯುಂ-ಪೆರ ಊರ್ಗೆ ಪೋದ ಬಗೆಯಾಣ್ಮರಂ ನೆನೆದು ದೂರಿಸುವಿನಿಯರ ಮೆಯ್ಗಲರ್ವಿ*ಲ್ಲನ ಕಣೆಯೇರಂ ಪುದುಂಗೊಳಿಸಿ ಬಿರಯದ ಬೆಂಕೆಯಿಂ ತಪಿಸಿಯುಂ-ವಸಂತಂ ಜಸವಂತನಾಗಿರ್ಪಿನೆಗನುದೊಂದು ದಿವಸಂ-

ಕೆಲಬರ್ ಸಿಂಗರಗಜ್ಜಮುಂ ಕೆಲಬರಾಮೋದ ಪ್ರಸಾರಂಗಳಂ
ಕೆಲಬರ್ ಚಾಮರಮುಂ ಕೆಲರ್ ಮೃದುವಚಸ್ಸಂದೋಹದಿಂ ರಾಗಮುಂ
ಕೆಲಬರ್ ನರ್ತನಮುಂ ಕೆಲರ್ ಪೊಗಳುತುಂ ಕೈಗಾಣ್ಕೆಯುಂ ಗೆಯ್ವಿನಂ
ಪಲಬರ್ ಪೆಂಡಿರ ತಂಡದಾ ಸಭೆಯೊಳಿರ್ದಂ ದಿವ್ಯಲೀಲಾಸ್ಪದಂ ||೧೮||

ಬೀಸುವ ಚಾಮರಾನಿಲ-ಕಲತ್- ಪ್ರಮದಾಸ್ಯಪಯೋಜ ಸೌರಭಂ-
ಸೂಸುವ ಪೂವ ನಸ್ಯ ಮೃಗನಾಭಿಯ ಪೊತ್ತುವ ಕಪ್ಪುರಂಗಳೋ||
ಳ್ಪೈಸುವ ಧೂಪ-ದೀಪಿಕೆಯ ಸಿಂಪಿಪ ಚಂದನದಾ ಸುಗಂಧವೊ
ಟ್ಟೈಸಿರೆ ಸೇರ್ದ ಕಂಪುಗಡಲೆಂಬವೊಲೊಪ್ಪಿದುದಲ್ಲಿಯೋಲಗಂ ||೧೯||

ಕಂದ|| ಕೋಗಿಲೆಯುಲಿವ ಕೊರಲುಲಿ
ರಾಗಾಬ್ಧಿಯನುರ್ಕಿಪರ್ಥ-ನಿರ್ಝರಿ ಹರಿಯುಂ ||
ತೂಗಿಸೆ ನಿಜತನು ಚೆಲ್ವಂ
ಬೀಗಿಸಲೋರ್ವರಲ್ಲಿ ಪಾಡುತ್ತಿರ್ದರ್ ||೨೦||

ತ್ರಿಪದಿಗಳ್ ||
ಪರಮಾತ್ಮನೆಂದೆಂದು ವರನಾತ್ಮನೊಡನಿಂದು |
ಪುರುಷರೂಪನನೆ ಸೇವಿಸಿ — ಬಹುಸುಖಾ
ಕರೆಯಾಗಿ ಬಾಳು—ಲಲಿತಾಂಗಿ ||೨೧||

ಉಡಲುಂಟು ತೊಡಲುಂಟು | ಕೊಡಲು ಬೇಕಾದ್ದುಂಟು
ಬಿಡದೆ ಸಂತುಷ್ಟಿ ಪಡಲುಂಟು — ಮೂಲೋಕ
ದೊಡೆಯಂ ಶ್ರೀಕೃಷ್ಣಂ — ಲಲಿತಾಂಗಿ ||೨೨||

ಶಿವನೀತಂ ಶಂಕರಂ | ಜವನೀತಂ ಸಂಹರಂ
ಬವಸೆ ಬೇರೇಕೆ ಸೇವೆಯಿಂ — ಶ್ರೀಕೃಷ್ಣಂ
ಧವನಾಗಿರಲ್ಕೆ— ಲಲಿತಾಂಗಿ ||೨೩||

ದೇವಕೀಮುದವಿತ್ತು ದೇವಕೀರ್ತಿತನಾದ |
ದೇವನೇ ಕೃಷ್ಣಂ ಭಜಿಸುವಾ — ಜನಕೀತಂ
ಭಾವದಿಂ ದೊಲ್ದು — ಸಲಹುವಂ ||೨೪||

ಭಕ್ತಿಯೊಂಬತ್ತಾಗಿ | ಚಿತ್ತಶುದ್ಧಿಪ್ರದಂ |
ಎತ್ತಲುಂ ನೋಡೆ — ಸತಿಭಾವಂ — ಮಾಧುರ್ಯ
ಭಕ್ತಿಸಮ್ರಾಜ್ಯ — ವಿಳೆಯಲ್ಲಿ ||೨೫||

ಕಂದ|| ಎಂತೆಂತು ನೆಗಳೆ ಕೃಷ್ಣಂ
ಸಂತಸಮುಂ ಪಡೆವನಂತು ಗೆಯ್ಯುತ್ತೆ ಪ್ರಸಾ |
ದಾಂತರ್ಯಜ್ಞಳ್ ನಯದಿಂ
ದಂತಾನೆಂದಳ್ ವನಾಟನೇಚ್ಛೆಯಿನೊರ್ವಳ್ ||೨೬||

ಬಯಸಿದುದಂ ಶ್ರಿತಜನ-ಸಮೂ
ಹಯ ಕೊಡಗಿಪನಲ್ತೆ ಭಕ್ತಚಿತ್ತಜ್ಞನೆ ನಿ |
ರ್ದಯೆಯಿಂ ಕೇಳ್ದು ತಿರಸ್ಕೃತಿ
ಗೆಯಲಾಗದೆನುತ್ತೆ ರಮಣ ಮೊದಲಾನೆಂಬೆಂ ||೨೭||

ತರುಮೂಲದೆ ತುರುಬಿಂದಂ
ಸರಸಿಸವಿಾಪದೆ ಮಲಂಗುಗುಂ ದಾರಿಗರುಂ |
ಮರುದನ್ವಿತ ಸಚ್ಛಾಯೆಯೊ
ಳಿರಲಿಚ್ಛಿಪರರಿದು ಪಗಲ ಬಿರುವಿಸಿಲತ್ತೀ ||೨೮||

ಪಾಡುವ ಕೋಗಿಲೆ ಬಿಸಿಲಿಂ
ಬಾಡುವ ಗಿಳಿ ಸೆಕೆಗೆ ಮರುಗಿ ಮರಿಯುಂ ಸಲೆಮು |
ದ್ವಾಡದ ಪರಿಯಾರಯ್ಯುತೆ
ನೋಡದರಾರ್ ಪಗಲ ಬಿಸಿಲ ಬೇಗೆಯಗಾಧಂ ||೨೯||

ಬಾಯೊಣಗೆ ಪಸಿವು ಬೆಮರೊಳ್
ತೋಯುತ್ತೆಳಗಾಯು ನೆಲ್ಲಿಗಾಯುಂ ನಲ್ಕಾಂ |
ಗಾಯುಂ ನೀರಂ ಗೇರನಿ
ಕಾಯುವನರಸುತ್ತುಮಿರ್ದಪರ್ ಗಡ ಪಾಂಥರ್ ||೩೦||

ಮಧುಮಾಸದೆ ಮುದಮುಂ ಬಿಸಿ
ಲೊದವಿಂ ಕೋಗಿಲೆಗೆ ದುಕ್ಕಮೊದಗುವವೋಲ್ ಸಂ |
ಪದದಿಂ ಸುಖಮುಂ ಕಟ್ಟ
ಕ್ಕಿದ ತೆರದಿಂದಿರ್ಪ ಕತದೆ ಮುರುಕಮುಮಕ್ಕುಂ ||೩೧||

ಪೆಂಡಿರೆವಂತರಿಂ ಗೃಹದೆ ಸಟ್ಟುಗವಾಂಪುದು ಮಕ್ಕಳಂ ಸೊಗಂ
ಗೊಂಡುರೆ ಸಾಂಕಿ ಸಂಪದಮನುಂಬುದುಃ ಕೇಳ್ವುದು ಗಾನಮುಂ ಮನಂ
ಗೊಂಡಿರಲೋದುಮಾ ಸಹಜ-ಸುಂದರ-ಬಂಧುರ-ನಂದನಂಗಳೊಳ್
ಕಂಡೆಡೆಗೀಗಳಿರ್ದ್ದು ನಲಿದುಂಡ ಸುಖೋದಯಕೊಂದು ಸಾಟಿಯೇ ||೩೨||

ಕಲಿಸದೆ ಬಂದ ಕೌಶಲದೆ ಪಾಡುವ ಕೋಗಿಲೆ ಮಾತನಾಡುವಾ
ನಲವಿನ ಬಾಸೆನಕ್ಕಿ ಪರಿವಂಚೆ ಮೃಗಾಳಿ ಮನೋನುರಾಗದಿಂ |
ದುಲಿವೆಳದುಂಬಿ ಚೆಲ್ವೆಸೆವ ಪೂಮರವಳ್ಳಿ ಕೊಳಂಗಳೆಂಬ ನ |
ಲ್ನೆಲಸಿರಿ ನೋಡದೀ ಮನೆಯ ಮೂರ್ತಿವೊಲೆಮ್ಮತುಬಾಳ್ಕೆ
ಬಾಳ್ಕೆಯೇ ||೩೩||

ಕಂದ|| ಇನಿಯನ ಮಾಧವನಾಗನು
ಘನೆಯಾ ವನದೇವಿ ಸಿಂಗರಿಸಿ ರಾಜಿಪುದಂ |
ಇನಿಯನೆ ಮಾಧವನೇ ನಾಂ
ವನವಿಹರಿಸಿ ನಾಡೆನೋಡವಯಸುವೇವೀಗಳ್ ||೩೪||

ವಿಮಲಾಂಬು ಪ್ರವಿಹಿತಮಂ
ಕಮಲಾಕರದಂತರಾಳಮಂ ಪುಗುತುಂ ವಿ |
ಭ್ರಮತರ-ವಿಲಾಸ-ಸಂಯುತ
ಮೆಗನುಪಮ ವಾರಿಕೇಳಿ ತೋಷದಮಕ್ಕುಂ ||೩೫||

ಗದ್ಯ || ಎಂದೆಲ್ಲರ ಮುಖಿಯಾಗಿ ನುಡಿದ ಸಖಿಯಿಂಗಿತಮನರಿತು.

ಕಂದ|| ಕೈರವಮರಲ್ದ ಬಳಿ ನೀ
ಹಾರಕರಂ ತೋರ್ದನೆಂಬವೋಲ್ ಚೋದಿಸುವಾ |
ನೀರೆಯರ ಹರ್ಷದಿಂ ನೀ
ಹಾರಮಯೂಖಾಸ್ಯನೆಂದನಾ ನಗೆವೆಳಗಿಂ ||೩೬||

ಸರಸಿಜಮುಖಿಯರ್ ವಿಪರೀ
ತರಸಾನ್ವಿತೆಯರ್ ಮರಾಳಕುಳಗಾಮಿನಿಯರ್ |
ಪರಿವೃತ ಚಕ್ರಸ್ತನೆಯರ್
ನಿರುಪಮೆಯರೆ ನಿಮಗೆ ಕೇಳಿಗಿನ್ನೇಂ ಕೊಳನೇ ||೩೭||

ಳಳನಾನ್ವಿತಸಾ ವಚನಾ
ವಳಿವನಿತಾವಳಿಯ ನಾಣ್ಚಿಸುತೆ ಬಾಗಿಸುತುಂ |
ಬಳೆಯಿಸಿತೊಲವಂ ಕಡಲೇಂ
ಗಳ ನಲಿಯದೆ ನಗುವ ಪೆರೆಯನೀಕ್ಷಿಸಿದಾಗಳ್ ||೩೮||

ಸಾಣೆಯಿಂದಿಳಿಸಿದ ಮೊಗಮಂ
ಪಾಣಿಯಿನೆತ್ತಿದೊಡೆ ತಳದ ಕೆಂಬೆಳಗಿಂ ರ
ಕ್ತೇಣಾಂಕ-ಮಂಡಲಕ್ಕೇ
ಸೂಣೆಯುಮಂ ತಂದುವವರ ಬಟ್ಟಮೊಗಂಗಳ್ ||೩೯||

ನೀಲದ್ಯುತನನಪಾಂಗದೆ
ಲೋಲೆಯರೊಡನಂದು ನೋಡೆ ಗೆಲೆವಂದತ್ತಾ |
ನೀಲಾದ್ರಿಯನೆರಗುವ ತಟ
ದಾಲಿಯ ಮೆಯ್ಸಿರಿಯನವರ ಕಣ್ಬೊಗರ್ದು*ರುಗಲ್ ||೪೦||

ತೇಜಂ ವಾಯುವಿನಲ್ಲದೆ
ತೇಜದಿನಾ ವಾಯುವೊಗೆದುದೆನಲಬಲಾ ದೃ |
ಕ್ತೇಜಃಪ್ರಸಾರಮಾ ಬಳಿ
ರಾಜದ್ವನ-ಸುರಭಿ-ವಾಯು- ತೀಡಿತ್ತಾಗಳ್ ||೪೧||

ಆ ವಾಯುವ ಕೆಳೆತನದಿಂ
ದಾ ವನದಿಂ ಕೃಷ್ಣದೇವನಂ ಕಳರವದಿಂ |
ಸಾವೇಶಂ ಕರೆವ ಪಿಕಾ
ರಾವಂ ಕವಿಗಪ್ಪುದೆನಿಸಿ ಕೇಳಸಿತಾಗಳ್ ||೪೨||

ಗದ್ಯ || ಆಗಳೆ ಬಾಗಿಲಿಗಿತಿ ಬಂದು ಗೆಂಟರೊಳೆ ಕುಂಬಿಟ್ಟು ದೇವ— ಪೊರವಾಗಿಲೊಳಾರವೆವಳಂ ಕಾದಿರ್ಪಂ ಪದನರಿಯಲ್ ಬಂದೆನೆನೆ— ಬರ್ಕೆಂದೊಡೆ— ಬಾಗಿಲಿಗಿತಿ ಪುಗವೇಳ್ಪುದುಂ- ವನಪಾಲಕನೊಯ್ಯನೆ ಬಂದು ಬೆನ್ನಂ ಬಿಲ್ಮಾಡಿ ಕಯ್ಮುಗಿದು ಚೆನ್ನ ಸುಗೆ ಪೂಗಳನಲಂಕಾರಪ್ರಿಯನ ಪಾದಕ್ಕಲತಿಗೆಯಂತಿಟ್ಟು- ಸಂಪಗೆಯಂ ನಿಳಿಂಪ-ಜನಾನುಕಂಪನ ಚರಣಕ್ಕೆ ಪೊಂಗಾಣ್ಕೆಯಂ

ತಿತ್ತು— ಮಲ್ಲಿಗೆಯಂ ಸೌರಭ-ಸಾಗರ-ರಮಾಲೋಲ ನಂಘ್ರಿಗೆ ಸೊವಡನೊಡರ್ಚುವಂತೆ ಚೆಲ್ಲಿ-ಕಮಲಮಂ ಕಮಲಾಪ್ರಿಯನ ಪಾದ ಕಮಲಕ್ಕೆ ಕೆಳೆಯಾಗಿಸಿ-ಮಾಂಬಳಮಂ ಮಾಬಳನಪ್ಪ ಚಕ್ರಿಗೆ ಸಮರ್ಪಿಸಿ—ಜೇನ್ನೆಯ್ಯಂ ಜಯರವದೊಡನಜೇಯಂಗೆ ಕೊಟ್ಟು ಮುಗುಳೆ ಪೊಡವಟ್ಟು—ನಿಮ್ಮಡಿ, ವಸಂತೋದಾತ್ತ ಬಹಿರ್ನಂದ ನಮಂ ದೇವರ್ ನೋಳ್ಪುದೆಂದು ಬಿನ್ನಪಂ ಗೆಯ್ಯಲಾ ವನಪಾ ಲಕನಂ ಪಸಾಯ್ತಮನಿತ್ತು ಕಳುಪಿದಾಗಳ್—

ಕಂದ ||
ಬಹಿರುದ್ಯಾನವನೀಕ್ಷಿಸು
ಮುಹಮುಹಮಿಕೆಯೊಗೆದುದಷ್ಟಮಾಂಗನೆಯರೊಳು |
ತ್ಸಹಸಂಚಿಣ್ಮೆ ಪೊಣ್ಮೆಸಿದ್ಧತೆ
ಸಹಸಾ ನಿಶ್ಚಿತ-ಮನೋಯಯುಕಂ ಹರಿಯಾದಂ ||೪೩||

ಮಂದಾನಿಲ ರಗಳೆ ||

ಆಗಳ್ ಪೊರಡುವ ಸಂಭ್ರಮುಮೆಸೆದಿರೆ
ರಾಗಧ್ವನಿ ಮಿಗೆ ಗಾನಂ ಪೊಸತಿರೆ
ಸುರುಚಿರ ಭೂಷಣ ಭಾಷಣವೊಟ್ಟಿರೆ
ಪರಿಮಳ-ವಸ್ತು ಚಯಮೊಡಂ ಬಟ್ಟಿರೆ
ಘೋಷದೆ ವಂದಿಚಯಂ ಕೈವಾರಿಸೆ
ದೋಷವಿವರ್ಜಿತಮೆನುತುಂ ಪ್ರೇರಿಸೆ
ಪುರಸೌಧಸ್ಥಿತ-ನಾರೀಕರದಿಂ
ದರಳಮುಳೆಗಳುರುಳುತ್ತಿರೆ ಭರದಿಂ
ಸತ್ತಿಗೆವೆಜನಚಮರ ನೆರವಿಗಳಿಂ
ಬಿತ್ತರಸಿಂಗರ ಬಿನ್ನಣಿಗೆಗಳಿಂ

ಶುಕ-ಕುಳ-ವಾಕ್ಪಟುತೆಯನೇಡಿಸುತುಂ
ಪಿಕ-ರವಮಂ ಸಲೆ ಕೀಳ್ಮಾಡಿಸುತುಂ
ಸುರರಂ ಬಿಡುಗಣ್ಣರನಾಗಿಸುತುಂ
ಧರಣೀಧರವನಚಲವಾಗಿಸುತುಂ
ಜಿತರತಿರೂಪರ್ ದ್ವಗ್ಸುಮರೋಪರ್
ಹಿತಸಲ್ಲಾಪರ್ ಮಾಧವನೋಪರ್
ಉಕ್ಕಿಸಿ ಮನಮಂ ಶೋಭಾಘನಮಂ
ಪೊಕ್ಕರ್ ವನಮಂ ಶೋಭಾವನಮಂ ||೪೪||

ಗದ್ಯ॥ ಅಂತುದ್ಯಾನಮಂ ಪೊಕ್ಕಾಗಳಲ್ಲಿ—

( ಸ್ರಗ್ಧರಾವೃತ್ತ )

ಸೌಂದರ್ಯಂ ನೇತ್ರಕಾಮೋದಿತ–ಸುಮನಿಚಯಂ ನಾಸಿಕಕ್ಕಂ ಫಲೋದ್ಯತ್
ಸಂದೋಹಂ ಜಿಹ್ವೆಗಾ ಕೋಕಿಲ-ಶುಕ-ಮುಖ-ಗೀತಾಳಿ ಕರ್ಣಕ್ಕೆ | ಶ್ರೈತ್ರಾ
ಮಂದಂ ಚಂದ್ರೋಪಲಂ ತ್ವಕ್ಕಿಗೆನಲೆಸೆವ ಪಂಚೇಂದ್ರಿಯಂಗಳ್ಗಸಂತಾ
ನಂದಂ ಚೈತ್ರೇಂ ವಸಂತಂ ಸೊಗಸೆ ಸೊಗಯಿಸಿತ್ತಿತ್ತಮುದ್ಯಾವ ನಾಂತಂ ||೪೫||

ತಳಿರ್ಗ*ಳ ಕಾವಣಂ ಮರಲತೊಂಗಲಸಾಲೆಳಗಾಯ ಬಾಳ್ ಫಳಂ
ಗಳಪೊಡೆಸೆಂಡನಾಡುವ ಪೊಲಂ ನರುಗಂಪಿನ ಕೋಣೆ ಭೂರುಹಾ |
ವಳಿಯ ಜನಸ್ಥಳಂ ಬೆಳೆವ ಬಳ್ಳಿಯ ಪಳ್ಳಿ ಸುಮಂಗಳಾಗರಂ
ತಿಳಿಗೊಳಕಿರ್ಪ ತಾಯ್ವನೆ ಪೊಗಳ್ತೆಯ ಸೋಬೆಗಳೆರ್ಕೆ ದಾಣಮುಂ ||೪೬||

ಗಿಳಿಗಳ ಪಾಟಸಾಲೆ ಮರಿದುಂಬಿಗಳೂಟದ ಕುಟ್ಟಿಮಂ ಪಿಕಾ
ವಳಿಗಳ ಗಾಣಸಾಲೆ ವನಹಂಸಯುಗಂಗಳ ಸೆಜ್ಜೆಸಾಲೆ ಸಂ।
ಗಳಿಸಿದ ಜಕ್ಕವಕ್ಕಿಗಳ ಬೇಟದಸಾಲೆ ಸುಶೀತವಾತದಾ
ಕುಳಗೃಹವಂಗಜಾತ-ಜಿತ-ಭೂಮಿ ವಸಂತನ ಬಾಳ್ಕೆಯಿರ್ಕೆಯುಂ॥೪೭॥

ಗದ್ಯ॥ ಎನಿಸಿ ತದ್ವನಂ ಸೊಗಯಿಸುತಿರ್ಪುದುಂ—

ಕಂದ॥ ಮಾಧವಿಯರಲ ಜಿನುಂಗಿಂ
ಮಾಧವನಂಗಂಗಳಂದು ತೊಯ್ದಂತಿರೆ ರಾ।
ಗೋದಿತ–ಮಾನಸನಾ ರಾ
ಗೋದಿತವಂ ಪುಗುವಿನಂ ವಸಂತದ ವನಮಂ ॥೪೮॥

ಅವನಿತಾ ಪಾದಸ್ಥಲಿ
ತಾವನಿಜಂ ಕೊನರ್ದುದೆಂಬವೊಲ್ ಚಿಗುರ್ಗಳ ಚೆಂ।
ಬೂವಿನ ಪೊಸೆವೊರೆಯಿಂದಂ
ಭೂವಿನ ಚೆಂದೋರಣಂಬೊಲೆಸೆದುದಶೋಕಂ ॥೪೯॥

ಬಳ್ಳಿಯಪೆಣ್ ಮೊರೆವಾಡಿನ
ಬಳ್ಳಿಯನೆಳೆಯುತ್ತೆ ಹರಿಯ ಮುಂದೆಸೆಯಿಂದಂ।
ಬೆಳ್ಳಿಯ ಮಂದಾರದ ಪೊಸ
ಬೆಳ್ಳಿಯ ತಳಿಯಂ ಮಿಳಿರ್ಚಿತಾರತಿಯೆಂಬೋಲ್ ॥೫೦॥

ಪೊಸತಂದೆನೆ ತೀಡುವಿನಂ
ಪೊಸತಂಬೆಲರಲ್ಲಿ ಬಾಳೆ ಚವರಂಗೆಯ್ದುಂ।
ವಸುದೇವಸುತಂ ಬಂದಿರೆ
ವಸುಧೇಶಂಗೆಲ್ಲರೊಸಗೆಯೆಸಗಲ್ವೇಡಾ ॥೫೧॥

ಕಿತ್ತಳಿಲ ಕಪಿಯ ಕಾಗೆಯ
ಕುತ್ತಾಗಿಯುಮಮಿತ-ಫಳ-ಸಮೂಹಂಗಳುಮಂ |
ಪೊತ್ತುವನೀಕ್ಷಿಸಿ ನುಡಿದನಿ
ದೊತ್ತಂಬದ ಸೌತೆವಿಂಡಿ ಎನುತುಂ ಪಲಸಂ ||೫೨||

ಮೊದಲೊಳ್ ಬೆಸನಂ ಬಾರ್ತೆಯೆ
ತುದಿಯಲ್ಲೆಂದರುಪುವಂತೆ ಬುಡಮುಂ ಪೊರೆವರ್ |
ತುದಿಯಿಂ ಬೆಳಸಂ ಪಡೆವರ್
ಮುದದಿಂ ಜನರೆಂದು ನೋಡಿದರ್ ಕೌಂಗುಗಳಂ ||೫೩||

ಕರೆಯುಂ ತಾಳ್ದಂಗಂ ಪಗ
ಲೆರೆಯುಂಗಂ ಲೋಕಹಿತರ್ಗೆ* ಯಿನ್ನೆಳಗಾಯುಂ |
ಉರದೀಯಲ್ ನೀಳ್ದುವೆನಲ್
ಮೆರೆವಾ ತೆಂಗುಗಳನೆಯ್ದೆ ನೋಡಿದರಿನಿಸುಂ ||೫೪||

ಮಕರಂದವ್ರತ-ಗೀತದಿಂ ಸೊಗಯಿಪುತ್ತುಂ ಕೋಕಿಲಾನೀಕದು
ನ್ಮುಖ ಶಬ್ದಂಗಳಿನೆಲ್ಲರಂ ಕರೆಯುತುಂ ಚಂಚಚ್ಛುಕಧ್ವಾನದಿಂ |
ಸೊಗಮಂ ಕೇಳ್ವವಿಧಾನದಿಂ ದೆಸೆದು ಪೂವಿಂ ಪಲ್ಲವಾನೀಕದಿಂ
ದೆ ಘನಾಂತಸ್ಸುಫಲಂಗಳಿಂ ವನದೆ ಚೂತಂ ಪ್ರೀತನಂತೊ
ಪ್ಪುಗುಂ ||೫೫||

ಗದ್ಯ || ಎಂದು ಮುಂತಾಗಿ ಭಾವನಾಲೋಕದಿಂ :ಸಮವ ಲೋಕಿಸಿ ಮನಸ್ತೃಪ್ತಿಯುಂ ತಾಳ್ದು ಪೆಂಸಂ ಪೊಗಳ್ದುಮಲ್ಲಿ— ಗಾಳಿಯಂತೆ ಯಥೇಚ್ಛೆಯಾಗಿಯುಂ — ಕಾರಮುಳೆಯಂತೆಲ್ಲೆಡೆ ವಿಡಿದುಂ — ರವಿದ್ಯುತಿಯಂತನರ್ಗಲ ವ್ಯಾಪಾರತೆಯಿಂದೆಯುಂ - ಸಿಂಧುವಿನಂತೆ ರಸರಾಶಿ ಕುಂದದೆಯುಂ-ತುಂಬಿವಿಂಡಿನಂತನುಕ್ರಮ

ದಿಂದೆಯುಂ-ಸಸ್ತ್ರೀಜನಂ ವಿನೋದಕರಣಂ ಶ್ರೀರಮಣಂ ವಿಹರಿ
ಪುದುಂ-ತತ್ಸುದತಿಯರ್ ಪೂಗೊಯ್ಯಲ್ ತರಿಸಂದು-

ಕಂದ || ಬಾಳೆಯ ಕಿತ್ತಲೆಯುಂ ಪೊಸ
ಬಾಳೆಯ ನಾರುಂ ಕರಾಬ್ಜರುಚಿ ಮಸುಳ್ವಿನೆಗಂ |
ಬಾಳೆಯುರೊಳೆಸೆಯೆ ಶಶಿನಿಭ
ಫಾಳೆಯರಲ್ಲಲ್ಲಿ ಕೊಯ್ದರಿಚ್ಚೆಯ ಪೂವಂ ||೫೬||

(ಮತ್ತೇಭವಿಕ್ರೀಡಿತ)

ಮನಮಂ ಮುಗ್ಧಗೊಳಿಕ್ಕುಮೊಲ್ಮೆತನಮುಂ ಪೆರ್ಚಿಕ್ಕುಮಾನಂದಮುಂ
ಜನಿಯಿಕ್ಕುಂ ಸುವಿಲಾಸಮುಂ ಮಿಗಿಸುಗುಂ ಸೌಂದರ್ಯವಿಸ್ತಾರದಾ
ಳ್ತನಮುಂ ಮಾಡಿಸುಗುಂ ಸುಗಂಧತೆಯನುನ್ಮೀಲಿಕ್ಕುಮಿಾ ಪುಷ್ಪಮೆಂ
ದೆನುತುಂ ಮಲ್ಲಿಗೆವೂವನಲ್ಲರಸಿ ಕೊಯ್ದರ್ ಮಲ್ಲಿಕಾಂಗಾಂಗಿಯರ್||೫೭

ಇದುವನಕಾಂತಿದಾಯಿಯಿದು ನಾರಿಯ ಸೈಪಿನೊಡಪುರ್ ರಂಜಿಪಿಂ
ತಿದನಪಹಾರ್ಯ-ಪುಷ್ಪರಸ-ಸಂಯುತಮಿಂತಿದು ಸೆಂಡಿರೊಳ್ ಸಮಂ
ತೊದವಿದ ಕೋಪಹಾರಿ ರಮಣೀಯುತೆಗಂ ಮಣೆಯೆಂದು ಕೊಯ್ದರಂ
ದದ ಕಡುಪೆಂಪಿನಿಂ ಮಲೆಯೆ ನಾಸಿಕಕೆ ಸಂಪಗೆವೂ-ಮುಗುಳ್ಗಳಂ||೫೮||

ಪಲದೆವಸಮುಳ್ಳ ಕಂಪುಂ
ತೊಲಗದ ಚೆಲ್ವುಂ ಕಳಲ್ಚದಿರ್ಪವಯವಮುಂ
ತಲೆಯೊಳ್ ಸೂಡಿದೊಡೊಳಮೆಂ
ದಲಂಪಿನಿಂದೊರ್ವಳಲ್ಲಿ ಸುರಯಿಯನಾಯ್ದಳ್ ||೫೯||

ಶಚಿಸೂಡುವ ಪೂವೆಂದ
ಲ್ಲಿಚದುರೆಯಾ ಪಾರಿಜಾತ-ಸುಮ-ಮಂಜರಿಯಂ |
ರುಚಿಧವಳೀಕೃತ ಶೀತಲ
ರುಚಿರ್ಝುರಿಯಂ ಕೊಯ್ಯೆ ಗಂಧಸಂಪತ್ಕರಿಯಂ ||೬೦||

ಅಚ್ಚರಸಿಯ ಪೊಸಚೆಲ್ವಂ
ಪೆಚ್ಚಿಸ ಪೂವೊಂದನಾಯ್ದು ಕೊಯ್ದುಳದೊರ್ವಳ್ ।
ಅಚ್ಚರಸಿಯ ಪೊಸಚೆಲ್ವಂ
ತುಚ್ಛೀಕರಿಪಂತೆ ಸೂಡಿ ಗಾಡಿಯಿನೆಸೆದಳ್ ॥೬೧॥

ಗದ್ಯ॥ ಅಂತು ಸಿಕ್ಕಿಸಿಕ್ಕಿದ ತಕ್ಕಿನ ಪೂಗಳನೆಕ್ಕೆಕ್ಕೆಯಿಂ ಕುಯ್ದು ಕುಯ್ದು ಬಿಸನಾಳ-ತಂತುವಿಂ ಬಿಗಿದು ಪೂಮಾಲೆಗಳನಪೂರ್ವದೇಶಿಗಳನೆಸಗಿ ಮುಡಿದಲಂಕರಿಸಿ ಸೊಬಗನವಲೋಕಿಸಿ ತಾಮೆ ಮೆಚ್ಚಿ ತೂಗಿ ನಲಿದುಕ್ಕಿ ತದ್ವನಾಂತರಮಂ ಸುತ್ತುತ್ತಿರ್ಪ ವನದೇವತೆಯರಿ ಪುಷ್ಪದೇವತೆಯರಾದರೆನಿಸಿ ರಂಜಿಸುತ್ತಿರೆ—ಮತ್ತಂ ಬಿಕ್ಕುವ ಕೂಸಳ್ಕರಿಂ ತಣಿಯದೆ ಬಂತನಿತ್ತುಂ ಪರಿಕರಂಗಳಿಂ ತೃಪ್ತೆಯರಾಗದ ನಿಜಾಪ್ತೆಯರೊತ್ತಾಯದಿಂದಾ ಚಕ್ರಿಯುಂ ಚಕ್ರವಾಕ-ಮಿಥುನ-ವಿಕ್ರಮ-ಧಾಮಮಪ್ಪ ತದ್ವನಜ-ವನಕ್ಕೆ ಬಂದಾಗಳ್—

( ಮ. ಸ್ರ. )

ಇದು ಮೂಲೋಕಾಂಬುಜಾರಣ್ಯದ ಸೊಬಗುಗಳೊಂದಾಗಿ
ನಿಂದಿರ್ಪ ತಾಣಂ
ವಿಧುಕಾಂತಿ-ಕ್ಷಾಳಿತೇಂದೂಪಳದೊರೆತದ ಶುಭ್ರಾಂಬುಗಿಂಬಾದತಾಣಂ।
ಮದನಾವೇಗಾತಿ ಶಾಂತಿ-ಪ್ರದ-ದಮಗುಣಮೇ ನೀರರೂಪಾಂತ ತಾಣಂ
ವಿಧಿಕೌಶಲ್ಯಪ್ರಕಾಶಂ ವಿಮಳತೆಯ ನಿವಾಸಂ ಕೃತಾವಂದ
ತೋಷಂ ॥೬೨॥

ಸುತ್ತಣ ಗಿಡುಮರವಳ್ಳಿಯ
ಕುತ್ತುರ ಪಸುರ್ಗೆತ್ತಲಿರ್ಪ ತಡಿಯುಂ ಕೃಷ್ಣಂ
ಚಿತ್ತಹರವೆಸಗಿ ರವಿವಿಲ
ಸತ್ತೇಜೋಮಧ್ಯಸರಸಿಯುಂ ನಿಟ್ಟಿಪುದುಂ ॥೬೩॥

ಪೂವಿಂ ಪೂವಿಗೆ ಪಾರಿ ಪಾರಿ ಪೊಸಬಂಡಂ ಪೀರ್ವ ಬಲ್ದುಂಬಿ ನೀ
ರ್ಪೂವಂ ಸೆಜ್ಜೆಯ ಮಾಳ್ಪ ಸಾರಸಕೆ ಕೋಪಂ ದಾಳ್ದು ಗುಂಪಾಗಿ ಬಂ|
ದೇವಂ ಪಾಸದೆ ಕಟ್ಟುತಿರ್ದಪುದೊ ಬೆಳ್ಪಂ ತಾಂ ಕರಂಗಿಪ್ಪುದೆಂ
ಬಾವೋಲ್ ಮುತ್ತುತೆ ಠಾವಿಕುಂ ಸಹಿಕುಮೇ ಕರ್ತವ್ಯವಿಚ್ಛೇದನಂ||೬೪||

ಕೂಜದ್ರಾಜಮರಾಳದಿಂ ರತುನದಾ ಸೋಪಾನದಿಂ ಪಾನದಿಂ
ಸಾಜಂ ತೃಪ್ತಿಯ ತಾಳ್ದ ಜೀವತತಿಯಿಂ ದಾಮೋದದಿಂ ಮೋದದಿಂ
ಭೂಜಪ್ರಾಂತವನಾಡಿ ಕೀಡುವ ಸಮೀರಾನಂದದಿಂ ದಂದದಿಂ
ರಾಜದ್ರಾಜಸರಂ ರಜಃಪುಳಿನಮಿಶ್ರಂ ಕೂಲದಿಂ ಕೂಲದಿಂ ||೬೫||

ಎಡೆಯೊಳ್ ತೊಟ್ಟನೆ ಮೇಲೆವರ್ಪ ಕಿರುಕೆಮ್ಮೀನ್ ಬಂಬಲೇ ತಂಬುಲಂ
ಸಿಡಿವಂತೊಪ್ಪಿರೆ ಬಾಯಿನಲ್ಲಿ ಪರಿವಾ ಮೇಳಂಬದಾಳಂಬನಂ |
ಕಡೆಗಣ್ಣಾಂತಿರೆ ನೀರಜಾನನೆಯು ಚಕ್ರಸ್ತನ್ಯೆಯುಂ ಕನ್ಯೆಯುಂ
ತಡಿಯಿಂ ನೋಡಿದರಲ್ಲಿ ಸೂತ್ರಕಟಿಯುಂ ಶೃಂಗಾರಕಾಸಾರೆಯುಂ||೬೬||

ಕಂದ|| ಆಗಲಲ್ಕೇವಂ ಕೂಡಿದೊ
ಡೊಗೆಗುಂ ನಿಚ್ಚಂ ಪೊಣರ್ಕೆಯಿಾವಕ್ಕಿಗಳೊಳ್ |
ಜಗದೊಳ್ ಮಾನಿಸರೊಳವೆಂ
ದಗಲದೆ ಪೊಣರ್ವಕ್ಕಿಜುಗವನೀಕ್ಷಿಸುತಿರ್ದರ್ ||೬೭||

ಗದ್ಯ|| ಮತ್ತಮದು ಕುಜನಪರಿವೃತವಾಗಿಯುಂ ಸದ್ವಾಳಿಸಂಗತಮುಂ—ಪಂಕಜಯುತವಾಗಿಯುಂ ನಿರ್ಮಳಮುಂ—ಸಮರ್ಥಚಕ್ರಯುತವಾಗಿಯುಂ ವಿಜಯೋಚ್ಚಾರಹಿತಮುಂ—ಸಾರಸಹಿತವಾಗಿಯುಂ ಗೌರವಾನಕಾಂಕ್ಷಿಯುಂ—ಷಟ್ಪದನಾದಯುತವಾಗಿಯುಂ ದ್ವಿಪಾದ ಬಹುಭಾಷಿತಮುಮೆನಿಸಿದುದು. ಅಲ್ಲಿಯಾ ಸುದತಿಯರ್ ಪರಿಹೃತ—ನೂತನಾಭಿಲಾಷಾನ್ವಿತೆಯರಪ್ಪುದರಿಂದೆ ನೀರಾಟಮುಂ ಬಯಸುವುದುಂ—

ಕಂದ॥ ಅರಮನೆಯೊಳವನೆಯುಂ ಪೊರ
ಟರಸನೊಡಂ ಕೂಡಿಯಾಡಿ ಬನಮುಂ ಪೊಕ್ಕುಂ ।
ಚರಿಸಿಯುಮಾಸರ್ ಮಾಣದೆ
ಶರಕೇಳಿಯ ಬಯಸೆ ಬಯಕೆಗೇಂ ಕಡೆಯುಂಟೇ ॥೬೮॥

ಗದ್ಯ॥ ಅಂತೆಪ್ಪೊಡೆ ನೀರಾಡಿ ಚೆಚ್ಚರದಿಂ ಕುಳಿರ್ವ*ನೆಗೆ ಬರ್ಪುದೆಂದಾಗೋಪೀನಾಥನೆಚ್ಚರಿಸಿ ಪೋಪುದುಂ- ವಿಶೇಷ-ವೇಷ-ಭೂಷಣಂಗಳಂ ಕೂಲೊಳ್ ಪತ್ತುವಿಟ್ಟನುಕೂಲ-ವೇಷಾವೇಶರಾಗಿ- ಕುಡುಗುರುಳಾರಡಿಯುಂ ಗೆಲೆಯುಂ- ವದನಪದ್ಮಂ ಪದ್ಮದ ಪೆಂಪಂ ಪಿಂಗಿಸೆಯುಂ- ಚೆಂಬಾಯ್ದೆರೆ ರಕ್ತಾಬ್ಜಪತ್ರಮಂ ಮಸುಳಿಸೆಯುಂ-ಮುಗುಳ್ಮೊಲೆ ನೀರ್ವೂಮುಗುಳ್ಗಳಂ ಮಾರ್ಮಲೆಯೆಯುಂ- ಕೆಕ್ಕೆಗನ್ನಡಿ ನೀರವೈಮಲ್ಯಮಂ ರೂವುಗಿಡಿಸೆಯುಂ-ಪೊರ್ಕುಳ್ ನೀರ್ಗೊಳನ ಗುಣ್ಪಂ ಪಳಿಯೆಯುಂ- ತುಂಗನಿತಂಬಂ ಮಣಲ ದಿಣ್ಣೆಯ ನಿಳಿಕೆಯ್ಯೆಯುಂ- ಕೋಮಳಪಾಣಿ ಕಮಳನಾಳದ ಗಾಡಿಯನೇಡಿಸೆಯುಂ- ತೋರದೊಡೆ ತೀರದಬಾಳೆಯಂ ಸೋಲಿಸೆಯುಂ- ಕಂಕಣರವಂ ಕಂಕಣರವಮಂ ಸ್ಪರ್ಧಿಸೆಯುಂ - ಮೆಲ್ಲಡೆಯಂಚೆಗಳಂ ಮೆಲ್ಲನೋಡಿಸೆಯುಂ-ಜಡಜಾಕ್ಷಿಯರಾ ತಡಿಯಿಂ ಜಡಜಾಕರಕ್ಕಿಳಿವಾಗಳ್—

ಒಂದೆ ಶಶಾಂಕ ಬಿಂಬಮತಿದೂರ-ನಭಸ್ಥಿತಮಾದೊಡಂ ವಿಕಾ
ಸಂದಳೆಯಲ್ಕೆ ಕೈರವಕುಲಂ ಪಲವಿಂದುಮುಖಂ ಸಮಾಪಿಸಿ ।
ತ್ತೆಂದೊಡೆ ಪೇಳ್ವುದೇನನೊಡನಾ ಲಲನಾ-ಜನ-ವಕ್ತ್ರ-ಚಂದ್ರ-ರುಗ್-
ವೃಂದಮರಲ್ಚಿತಾ ಪಗಲೊಳಂ ಜಳಜಾಕರ-ಕೈರವಂಗಳಂ ॥೬೯॥

ಮೊದಲುತ್ಸವಮಾದುದು ತತ್
ಸುದತಿಯುಗೊರ್*ವೊರ್ದಲೆ ತೋರಿದಂತರಮಂ ಬೇ |
ಗದಿನಾಂ ಮುನ್ನೆಂದೀಸುವ
ಮುದದೊಳ್ ಸವತಿಯುರ ತುರಿಪವನ್ನೀಕ್ಷಿಸುತುಂ ||೨೦||

ಸ್ಪರ್ಧಿತ-ದೀರ್ಘಕಾಲ-ಜಲಮಗ್ನ-ಮಹೋತ್ಸವ-ರಾಗ-ಹರ್ಷಿತರ್
ವರ್ಧಿತ-ಲೋಲ-ವೀಚಿ-ತನುತಾಡಿತ ವಾರಿಗಳಂಗಮಂದು ಕ |
ರ್ಚಿದರ್ದರಿಂದೆ ಪೆರ್ಚಿದತಿ ಸೌರಭಮಾದ ಜಲರ್ ಮುದಂ ಮನಂ
ಬೊರ್ದೆ ಸುವಾಸಿನೀಜನರೊರಲ್ದು ಸರೋವರದಲ್ಲಿಯಾಡಿದರ್ ||೨೧||

ಪಾಯ್ದು ಮುಣುಂಗಿ ಪೋಗಿಯಡಿನೀರೊಳಗಾಡುತೆ ಮೀಂಗಳಂತೆ ಯಾ
ರಯ್ದು ತದಧ್ವದೊಳ್ ಪರಿವ ಕಟ್ಟುತೆ ಮೇಗೆಯೆ ಗೊತ್ತನಾಯುತುಂ|
ಸುಯ್ದು ಮಹೋತ್ಸವಂ ಬೆಡಸು ತೆಂಕುತೆ ಮತ್ತೆ ತಿರುಂಗುತೀಸುತುಂ
ಮುಗ್ಧೆಯರಲ್ಲಿ ನೀರಕೊಳದಲ್ಲಿ ಕರಂ ಶರಕೇಳಿಯಾಡಿದರ್ ||೨೨||

ಆಳದ ನೀರಿಲಿ ಮೀಪಂ
ತಾಳದ ನೆಲೆಯಿಲಿಯೆನಿಪ್ಪ ಪಾಡಿನ ತೆರನೆಂ |
ದಾಳದ ನೀರಾಟಕೆ ಪುದು
ವಾಳದ ಸವತಿಯುನದೊರ್ವಳಳಿಸಿದಳಾಗಳ್ ||೨೩||

ಗದ್ಯ॥ ಮತ್ತಮೊರ್ವಳೆಂತಾನುಮೀನಿಸುಂ ತೆಂಕಲರಿಯದೆ ಸೊಗಂ
ಗೆಟ್ಟು ಸುಯ್ಯುತ್ತಿರ್ಪಿನಂ—

ಒಣತೆಂಗಾಯ್ ಜುಗಮುಂ ತಳೆ
ಮುಣುಂಗದಿದು ಕಲ್ಪರೀತಿಯೊಳಗಾಯಂತೀ |
ಪೊಣರ್ವೆದೆಯ ಭಾರಮೀಗಳ್
ಮುಣುಂಗಿಕುಂ ನಿನ್ನ ತನುವನೆಂದಳಸೊರ್ವಳ್ ||೨೪||

ಮೆಲ್ಲನೆ ಮುಳುಂಗಿಯೊರ್ವಳ
ದೆಲ್ಲರ್ ಸುಸ್ಫಟಿಕಲಿಂಗಮುದ್ಭವಿಸಿತು ನೀ
ರಲ್ಲೆಂದೀಕ್ಷಿಸೆ ತಂದಳ್
ಕಲ್ಲನೆ ನಗೆ ಕಲ್ಲನೊಂದನೆತ್ತುತತ್ತಾಗಳ್ ||೭೫||

ತಾವರೆ ಸೆಟ್ಟೆಲೆ ನೀರಂ
ತಾವರೆಬರ್ ಮೊಗಕ್ಕೆ ಚಿಮ್ಮೆ ತಾವರೆಯೆಲೆಯಿಂ |
ತಾವರೆಬರ್ ತಡೆಯುತ್ತುಂ
ತಾವರೆ ಸೆಟ್ಟಿಲೆಯ ನೀರ ಚಿಮ್ಮುತಿರ್ದರ್ ||೭೬||

ಪನಿಯಂ ಪಾರಿಪಿನಂ ಜೇಂ
ಬನಿಯಂ ಪೀರ್ವಳಿಗೆ ತಾವರೆಯ ಕೊಡೆವಿಡಿದುಂ |
ಘನಮುಂ ಕಾಯಲ್ ಗೋವ
ರ್ಧನಮುಂ ಹರಿಯಿಂತು ತಳೆದನೆಂದಳದೊರ್ವಳ್ ||೭೭

ಲೋಲೆಯುದೊರ್ವಳ್ ತೇಲ್ವ ಮೃ
ಣಾಲಕೆ ತಡಿಯಿಂದೆ ನೆಗೆದು ಮುಳುಗುತ್ತೆಳ್ದಾ |
ಕಾಲಿಯ ಮರ್ದನಮುಂ ಗುಣ
ಶೀಲಂ ಗೆಯ್ದಂದಮೆಂದು ನಗೆಯಿಂದೆಂದಳ್ ||೭೮||

ಅಡಕೆಯ ಕುರುಗಿಡಜುಗದೊಳ್
ತೊಡರ್ದೊಂ*ದಾಯತ-ಲತಾಗ್ರಮುಂ ಸೆಳೆದೊಡದಂ |
ಪಡಿಯಿಂ ಮುಗುಳ್ಚೆ ಮುತ್ತಿಯು
ಜಡಜಾಕ್ಷಂ ಮುರಿದ ತೆರನಿದೆಂದಳದೊರ್ವಳ್ ||೭೯||

ಗದ್ಯ ॥ ಅಂತು ನಿಜವಲ್ಲಭನುಂ ಜಗದ್ವಲ್ಲಭನುಮಪ್ಪ ಶ್ರೀ ಕೃಷ್ಣನ ದಿವ್ಯಲೀಲೆಗಳಂ ತಮ್ಮ ಲೀಲೆಗಳೊಳನುಕರಿಸುತ್ತುಮಾತ್ಮತೃಪ್ತಿಯಂ ಬಡುತ್ತಿರ್ಪುದುಂ—

ಬಿಂಬಾಧರರಾಗಂ ನೀ
ಳ್ದಂಬಕದೊಳ್ ಮತ್ತಮಂಬಕದ ಧಾವಳ್ಯಂ ।
ಬಿಂಬಾಧರದೊಳಗೆಸೆಯೆ ನಿ
ತಂಬಿನಿಯರ್ ನೀರಕೇಳಿಯಿಂ ತಣಿದೆಳ್ದರ್ ॥೬೦॥

ಗದ್ಯ ॥ ಅಂತೆಳ್ದು ವೇಷಭೂಷಣ-ಪರಿಮಳಾನುಲೇಪನಾದಿಯಿಂ ಪುನರಲಂಕಾರ ಶ್ರೀಯನಪ್ಪುಕೆಯ್ದು ತಳ್ವದಂತೆ ನಲ್ಲಂ ಪೇಳ್ದಲ್ಲಿ ಗೆಯ್ದಿ ವರ್ಪುದುಂ—

ಕಂದ ॥

ಭೂತಳದೆಲ್ಲಾ ಶೀತಳ
ತಾತಳಮೆಂಬಶೀತಳಾಂಶುಗಂ ಬೆಳ್ಕರುನಂ
ತಾತಳಮನೆಯ್ದಿದಂತೆ ನಿ
ವಾತಳಕಾ-ಕುಂಜ-ಶೀತಳ-ಸ್ಥಳಮೆಸೆಗುಂ ॥೬೧॥

( ಉತ್ಪಲಮಾಲೆ )

ಅಲ್ಲಿ ಸುರತ್ನಪೀಠಸುಡರೊಳ್ ತಳಿರ್ವಾ*ಸಿರೆ ಬಾಳೆಗಂಬಮಾ
ಮಲ್ಲಿಗೆವಂದರಂ ಮಿಸುಪಶೋಕದ ರತ್ನದ ಭಿತ್ತಿ ಕೌಂಗುಗಳ್ ।
ಅಲ್ಲಿಯ ಲೋವೆ ನೇಲ್ವ ಗರಿವೂ ಮರವೇಲಿ ಮನೋಜ್ಞವಾಗಲಾ
ನಲ್ಲೆಯುಗೊ*ಡಿ ಬಳ್ಳಿವನೆಯಲ್ಲಿರೆ ಶ್ರೀಹರಿ ಚೆಲ್ವು ಚೆಲ್ವಿವೋಲ್ ॥೬೨॥

ಮ|| ಸ್ರ||

ಪಿರಿದೊಂದುದ್ವೃತ್ತ-ಬುದ್ಧಿ-ಪ್ರಹತ-ನಿಜಮನಂ ಸಾಂಪ್ರತಂ
ಪೋಗಲೆಂಬಾ
ಗುರುವಾಕ್ಯೋಲ್ಲಂಘನಂ ಖೇಚರರ್ಗ*ವಿಷಯ-ಭೂಭಾಗ-ಸಂಚಾರ
ಚಿತ್ತಂ ||
ಪರಿಮಾಣೋತ್ತೀರ್ಣ-ವೇಗಾನ್ವಿತ-ಕಠಿಣ-ಹಯಂ ತನ್ನೊಳಿರ್ದಂ
ತರಿಂದಾ
ತ್ತರದಿಕ್ಪಾಲಾತ್ಮಜಂ ನಿರ್ಭಯವಿನಯ ಗಯಂ ಬೀಗಿ
ಗರ್ವಾಪ್ರಮೇಯಂ ||೮೩||

( ಮತ್ತೇಭವಿಕ್ರೀಡಿತಂ )

ಸುಚಿರಾಂಭೋನಿಧಿ-ದುರ್ಗ-ಭೂವಳಯಮಂ ನಿಶ್ಶಂಕೆಯಿಂದೊಂದೆ ಅ
ಷ್ಟ ಚಣಂ ಸುತ್ತುವ ವೇಗಸಮ್ಮಿಳಿತ-ದೀರ್ಘಾಂಗಾಖ್ಯಮಂ ವಾಜಿಯಂ||
ಮುಚಿಯೊಪ್ಪುತ್ತಿರೆ ಪಲ್ಲಣಂ ಬಿಗಿದು ತಾನಾರೋಹಿಸುತ್ತಂ ವನಾ
ಳಿಚರದ್ವಾರಣದಂತೆ ದೋರಗೆಗೆಮಂದಂ ಸ್ವೇಚ್ಛೆಯಿಂ
ಧಾತ್ರಿಯೊಳ್ ||೮೪||

ಎಂಬಲ್ಲಿಗೆ ಸತ್ವಾಲೋಕನ ಕಾವ್ಯದೊಳ್

ವ ನ ವಿ ಹಾ ರ ವ ರ್ಣ ನ ಂ

ದ್ವಿತೀಯಾಶ್ವಾಸಂ



# ಗಯಪರಿಭ್ರಮಣಂ

## ತೃತೀಯಾಶ್ವಾಸಂ

ಕಂದ॥ ಶ್ರೀರಮಣನೇರಿ ಪೋಗುವ
ಗಾರುಡ ವೇಗಂ ಸ್ವವಾಜಿ-ವೇಗಕೆ ವೇಗ
ಪ್ರಾರಂಭದೊಳೇ ಕೀಳೆಂ
ದೋರುತಿರೆ ಗರ್ವಿಯಾದನಾಗಲ್ ಬಹುದೇ ॥೧॥

ನಡೆಬೇಗಂ ನಡೆಯಿಂದೆಗಾಡಿ ನಡೆಯುಂದಂ ಗಾಡಿಯಿಂದೆಣ್ಣೆದೇರ್
ನಡೆಯಿಂ ಗಾಡಿಯಿ ನೆಣ್ಣೆದೇರ್ಗತಿಯ ಮಾರ್ಗಂ ದೂವೆದೇರೆತ್ತಲುಂ ।
ನಡೆಯಿಂ ಗಾಡಿಯಿನೆಣ್ಣೆದೇರ್ ಪೊಗೆಯತೇರಿಂ ವ್ಯೋಮಯಾನಂ ದಲಂ
ದಡರಲ್ಕಾ ಹರಿ ವೇಗದಿಂ ದಿಪುಗಳಂ ಮಾರ್ವಂತದೇನೋಡಿತೋ ॥೨॥

ಖುರಘಾತೋದ್ಧೂತ ಪಾಂಸುವ್ರಜವೊಗವ ಮೊದಲ್ ಗಾವುದಂ ದಾಂಟುವನ್ನಂ
ಧರೆಯಂ ಘೋಟಾಖುರಂ ಕಿಟ್ಟುವುದತಿಭರದಿಂ ಸಂದೆಯಂ ಮಾಡೆಯುಂ ವಿ ॥
ಸ್ತರವಾಗೋರ್ವಪಾಂತಭೂಜಾವಳಿಯತಿರಭಸಂ ಬೆತ್ತು ಪಾರ್ಶ್ವಂತೆಕಾಣು
ತ್ತಿರೆ ವೇಗಕ್ಕುತ್ತರಾಶಾಧಿಪ-ಸುತ-ತುರಗಂ ವೇಗದಿಂ ಪಾಯ್ದುದಾಗಳ್ ॥೩॥

ರಜಮಾಗುತ್ತೆಯಮರ್ತ್ಯ-ವಿಷ್ಟಪವನೀ ಭೂಮಂಡಳಂ ಸಾರ್ವುದುಂ
ರಜದಾ ಭಾರದ ಭಾರಣಕ್ಕೊಡನೆ ಬೀಳ್ವಾ ಭಾರದಿಂ ಪೃಷ್ಠ ಭೂ ॥
ವಿುಜವಂ ಗುಂದಿ ವಿದಾರಣಂ ದಳೆಗುಮೆಂಬಂತಾಕ್ಷಣಂ ಭೂಮಿಯುಂ
ರಜವೆಳ್ದತ್ತ ಕಟಾ ದಿವಕ್ಕೆ ಗಯನೇರ್ದಾ ವಾಜಿ ಸಾಮಾನ್ಯಮೇ ॥೪॥

ದೆಸೆಗೆಡಿಸಿತ್ತನೇಕರುಮನಾಸ್ಯಕೆ ವಸ್ತ್ರವನೊತ್ತಿ ಪತ್ತಿಸಿ
ತ್ತುಸಿರ್ಗೆ* ವಿಳಂಬವಂ ನೆಗಳ್ದು* ಥೂಕರಿಸಿತ್ತೆಮೆಯಂ ಪೊರಳ್ಚಿ ಪು
ಟ್ಟಿಸಿದುದು ಬಯ್ಗುಳನ್ನೊಗಡಿಸಿತ್ತಿಳಿಗದ್ಭುತ-ದುಃಖಜಾಲಮಂ
ಮಸಗಿಸಿತಂತು ಪರ್ಬಿತು ರಜಂ ಖುರ-ತಾಡಿತ-ಭೂಪ್ರದೇಶಜಂ ||೫||

ಚಳಿಸುವ ವಾಹನಕ್ಕೆ ಹಯಕಾವುದು ಬೀದಿಯದಾವ ಪಾರ್ಶ್ವಗಂ
ಚಳನಮಯುಕ್ತಮಾವಗತಿ ತಕ್ಕುದದಾವೆಡೆ ನಿಂತು ಸುತ್ತಿಯಾ ||
ಪೊಳಲೊಳದೆತ್ತವೋಗೆ ಸರಿಯೆಂಬುದಲಕ್ಷಿತಮಾಯ್ತು ಕಟ್ಟು ತೊ
ತ್ತಳದುಳಿದತ್ತು ತತ್ತುರಗದೃತ್ಯಮದೊತ್ತಿನ ಬೀದಿಲೋಗರಂ ||೬||

ಎಡೆವಿಡದ ಜನದ ಸಂದಣಿ
ಯಡಿಯಿಡುವೆಡೆ ಬಗಿದು ಚಿಗಿದು ಗಯನ ಹಯಂ ಸೊ |
ಕ್ಕಿಡಿದತಿ ಭರದಿಂದೋಡುತೆ
ಕೆಡಪಿತು ಮಡುಪಿತ್ತು ತುಳಿದು ಕೊಳಗಿಂ ಜನಮಂ ||೭||

ತೆಗಳ್ವ*ರ ಮಾತುಮಂ ಕಿವಿಗೆ ಕೊಳ್ಳದೆ ಬೀಳುತೆ ಸಾವರಂ ಮನ
ಕ್ಕೊಗೆದಳಲಿಂದೆ ನೋಡದೆ-ಕೃಪಾಕ್ಷಿಯೊಳೀಕ್ಷಿಸಿ ಕಾಯೊ ತಕ್ಕುದಂ ||
ನೆಗಳದೆ ನಿಲ್ವೊಡಕ್ಕುಮೆ ಜನೇಶ-ಎನುತ್ತಮೆ ಶೌರಿಯುಂ ಶರಣ್
ಬುಗುವರಲಕ್ಷ್ಯಮಾಗಿರೆ ಬರುತ್ತಿರೆ ಪಾರ್ಶ್ವದೆ ನಿರ್ಭಯಂ ಗಯಂ ||೮||

ಗದ್ಯ || ಅಂತು ದೋರಗೆಯಂ ಗೋಳ್ಗುಡಿಸುತ್ತೆ ಚಣದೊಳ್
ಸುತ್ತುತ್ತೆ ಪಿಂದೆರಳುತ್ತಿರಲಲ್ಲಿ ವಲ್ಲೀಗೃಹದಲ್ಲಿರ್ದ ಜನಕಾಂತನಪ್ಪ
ಶ್ರೀಕಾಂತಂ ತಿಳಿದು—

( ಚಂಪಕಮಾಲೆ )

ಇದು ಪಿರಿದಪ್ಪ ಗರ್ವಮಿದು ಲೋಕಕಶಾಂತಿಯನುಂಟುಮಾಳ್ಕುಮಿಂ
ತಿದು ನಿಜ ಭೂಪ್ರಜಾಜನಕೆ ಕಷ್ಟವನೀವುದು ಮತ್ಸರಾಭವಾ ||
ಸ್ಪದಮಿದು ವಿಕ್ರಮಕ್ಕೆಡರಸಹ್ಯಮಿದೆಂದು ಮನಕ್ಕೆ ಮೆಚ್ಚಿನಾ
ಸುದತಿಯರ್ಗಂ* ವಿರಾಗಕರಮೆಂದೆನುತಾಂತನುದಗ್ರ-ರೌದ್ರಮಂ ||೯||

ಮತ್ತಚಕೋರನೇತ್ರನುದಿತಾಯಸ-ಗಾಢ-ವಿಮುಷ್ಟಿ-ಭಂಗಿತೋ
ದ್ವೃತ್ತಲಲಾಟನುದ್ಧುರ-ಸಮುಚ್ಛ್ವಸಿತಂ ಪರಿಚಾಲ-ದೇಹನಾ ||
ಯತ್ತ ಶರೀರ-ಕೋಪ-ಪುಳಕಂ ರದನಸ್ಫುಟಿತಾಧರಂ ದ್ವಿಷ
ನ್ಮೃತ್ತಹರಂ ಮುರಾಸುರಹರಂ ಹರನಂತಿರೆ ಬಲ್ಲನೇ ಗಯಂ ||೧೦||

ಕೋಪವನಾಂತನೋ ಜೆದರ್ದ*ನೋ ಪಗೆಗೊಂಡನೊ ನೇಹಗೊಂ
ಡನೋ
ಚಾಪವನಾಂತನೋ ವರಸುದರ್ಶನಮಂ ತಳೆದಟ್ಟಿ ಬಂದನೋ ||
ರೂಪಮೆ ಕೆಟ್ಟು ಕೋಳ್ಪಡಿದನೋ ಕೊಲಲಿಟ್ಟನೊ ಸೂಱುಗೊಂಡನಿಂ
ದೀಪರಿಯೊಂದುಮಂ ಮನದೆ ಭಾವಿಸನಾ ಗಯನೊಂದು
ಗರ್ವದಿಂ ||೧೧||

ಸಂಪದನುಂಟು ತನ್ನ ಬಗೆಗೊಪ್ಪಿದ ಪೆಂಡಿರ ಮೇಳಮುಂಟು ತಾ
ತಂ ಪರಮೇಶಮಿತ್ರನೆನಿಪೊಪ್ಪುವ ಪೆರ್ಮೆಯುಮುಂಟು ಸರ್ವರಿಂ ||
ದಂಪದಪೊಂದಿದೊಂದು ಕುಲಮುಂ ಚಲಮುಂ ಬಲಮುಂ ನೆಗಳ್ತೆಯುಂ
ಟಿಂ ಪೆರತೇಕೆ ಜವ್ವನಮಿರಲ್ ಮದಮಿಲ್ಲದೆ ಬಾಳ್ಕೆಯಿರ್ಪುದೇ ||೧೨||

ಗದ್ಯ || ಅಂತಾ ಖೇಚರಂ ಗೋಳಾಯ್ಲನಾಗಿ ರಯದಿಂ ಪಾಯ್ದು ಪೋಪಿನೆಗಂ —

ಕಂದ|| ಆ ಕೃಷ್ಣನ ಕೋಪಾಕ್ಷರ
ವಾಕೃತಿಯಂ ತಳೆದು ಮುನಿಪನಾದತ್ತಿನಲ ||
ಪ್ರಾಕೃತ-ತನು ಪರಮಾತ್ಮಾ
ಜ್ಞಾಕೃತ-ನಟನೆನಿಪ ನಾರದಂ ಕಣ್ಗೆಸೆದಂ ||೧೩||

ಗದ್ಯ || ಅಂತಾ ನಾರದಂ ದೂರದ ನೀರದ-ಪಥದಿಂದಿಳಿದು ಬಳಿಯೊಳೆ ಮೆಯ್ದೋರಿ ನಿಲ್ ನಿಲೆಂದೆಣ್ಣದೇರ್ಗೆ ಮಾರ್ಗದೊಳ್ ಪಯಣಿಗರಂತೆ ಕಯ್ಯೆತ್ತಿ ಸನ್ನೆಗೆಯ್ದೊಡಂ ಗಯನೆವೆಯೆತ್ತಿಯುಂ ಸಮೀಕ್ಷಿಸದಿರ್ಪುದುಂ—

ಕಂದ|| ಸಂಚಿತ ಭಗವದ್ಗೀತೋ
ದಂಚಿತ ಮಹಿಮಾ ವಿಶೇಷದಿಂ ತ್ರಿಭುವನಮಂ
ಸಂಚರಿಪನನೀಕ್ಷಿಸದಂ
ಪಂಚಾಮೃತ-ರಸವನುಗುಳ್ವ* ಗಾವಿಲನಲ್ತೇ ||೧೪||

ಹಿತಮಂ ಗೆಯ್ಯಲ್ ಕಿತ್ತಡಿ
ಪಥದೊಳ್ ಮೆಯ್ದೋರೆ ಲೆಕ್ಕಿಸಂ ಗಯನವನಂ ||
ಪದೆವಿನಮಣಿಂಗನಾಂ ಬಹು
ವಿಧದಿಂ ದೆಳಗರು ಕಡಂಗಿ ಚಡಪಡಿಸುವವೋಲ್ ||೧೫||

ಮೂರುಂ ಮತ್ತಂ ನಾಲ್ಕನೆ
ಮೂರುಂ ಗಳಿಗೆಯೊಳೆ ಮೂರು ಧರೆ ಚರಿಸುವುದಂ ||
ಮೀರುವೆನೆಂದೆನ್ನಂ ಮುನಿ
ಮಾರಾಯುಂ ತಡೆಯಲಾರ್ಗುಮಪ್ಪು ಮುಚ್ಚರದಿಂ ||೧೬||

ಗದ್ಯ || ಎಂದಾತಂ ತಡೆಯದೆ ನಡೆಯುತ್ತಿರೆ—

ವೇಗಸ್ತಂಭನ-ವಿದ್ಯೆಯಿ
ನಾಗುಣಿ-ಮುನಿ-ನಾರದಂ ಹಯಂಗದಡೆದಂ ||
ವೇಗದೆ ಬರೆ ದೂಳೆಲ್ದಿರೆ
ರಾಗಾಕ್ಷಂ ಕೇಳ ನಿನಗೆ ಕೃಷ್ಣಂ ಮುಳಿದಂ ||೧೭||

ನಿನ್ನೈಸಿರಿಯೊಟ್ಟಜೆ ದೆ
ಪೋರ್ನ್ನತಿ ದುರ್ನೀತಿಯುದಟನೆನ್ನೊಳ್ ತೋರ್ದೈ ||
ಸನ್ನುತರಂ ಪೀಡಿಸಿದಯ್
ನಿನ್ನನ್ನೆಂಟನೆಯ ಪಗಲೊಳಳಿಯದೆ ಮಾಣೆಂ ||೧೮||

ಗದ್ಯ || ಎಂದು ಸೂರುಳಿಟ್ಟನದಲ್ಲದೆ ನಿನತೆವಿಚಾರಂ ಪೊಲ್ಲದಾ
ಯ್ತಾತನ ಪತ್ತನದ ನೇಮವನರಿವೊಡೆ—

ಕಂದ || ಅನಿಲಂ ತಾಂ ಪ್ರತಿಹತಗತಿ
ಯೆನಿಪಂ ಶ್ರೀ ಕೃಷ್ಣನಿತ್ತ ಡಂಗುರದಿಂದಂ ||
ಜನಿಯಿಸನೆಂತುಂ ರಜವುಂ
ಜನಕ್ಕೆ ಹಿತಮಾಗಿ ವಾಹನಂಗಳ್ ಚಲಿಕುಂ ||೧೯||

ಜನರೊಳ್ ಸ್ವಧರ್ಮಮನುಶಾ
ಸನಮುಂಟುಪ್ಪೀಡೆಯಿಲ್ಲವಿಾ ದೋರಗೆಯೊಳ್ ||
ವನಧಿ-ನಭೋನಿಲ-ಶಿಖಿ-ಮೇ
ದಿನಿಗಳ್ ತಪ್ಪದಿರೆ ತಪ್ಪಿನೀಂ ನಡೆಯುವುದೇ ||೨೦||

ಅರಿತುಂ ಪೇಳದ ತಪ್ಪಿಂ
ಗೆರೆವಟ್ಟಾದಪೆನದಲ್ಲದೆನುತುಂ ನಿನಗಾ ||
ನರುಪಿದ ತಪ್ಪಂ ಮನ್ನಿಪು
ದರಿದೇಕೆಯೊ ನಿಲ್ಲೆ ಮುಂದೆ ಧಾವಿಸು ಜವದಿಂ ||೨೧||

ಗದ್ಯ ॥ ಎಂಬುದುಮಾ ನಾರದೇರಿತಂ ಮುದರ್ಗಗುತ್ತಿನಂತೆಯುಂ-
ಕೂರ್ಪುಣುಂಬುವೆಟ್ಟಿನಂತೆಯುಂ - ಕೂರ್ವಾಳ ಕಡಿತದಂತೆಯುಂ-
ಕಿರ್ಚಿನ ಚುರ್ಚುಂಬೇನೆಯಂತೆಯುಂ- ಭೋಂಕನೆ ಗಯನಮನಕ್ಕೆ
ಪುಗುತೆವಡೆವ್ವುದುಂ, ಭೋರನೆ ಮುನಿಚರಣಕ್ಕೆರಗಿ ಪೋಗದಂತೆ
ಗಟ್ಟಿವಿಡಿದು, ಗುಂಡಿಗೆ ಕೆಡೆದ ಸೊಂಡಿಲನಂತೆಯುಂ ಬಲೆಗೆ ಸಿಲ್ಕಿ
ದೆರಲೆಯಂತೆಯುಂ ಬಾವಿಗೆ ಬಿಳ್ದ ಮುಂಕಡನಂತೆಯುಂ ಸಂಪಿಗೆಗೆರ
ಗಿದಳಿಯಂತೆಯುಂ ಸೊರ್ಕನುಳಿದು, ಗರಂಬೊಯ್ದನಂತೆಯುಂ
ಬೂತಬಿಡಿದನಂತೆಯುಂ ಮುಚ್ಛೆವೋವನ್ನಂತೆಯುಂ ಮಿಡುಕಲರಿ
ಯದೆ, ಕುಳಿಕೋರ್ಡಿದನಂತೆಯುಂ ಪಗೆಗೆ ಸಿಲ್ಕಿದ ಪೆಂಬೇಡಿಯಂ
ತೆಯುಂ ಪಾವಿನ ನಂಜುವಲ್ಲುಕೊಂಡನಂತೆಯುಂ ಬೂತಮಂ ಕಣ
ಕಂಢನಂತೆಯುಂ ಭಯಜ್ವರಂಗೊಂಡು ನಡನಡುಗಿ, ಕಣ್ಗೆ
ಚಂಡಾಂಶು ರಶ್ಮಿವೊಕ್ಕಂತೆಯುಂ ಪೊಗೆಕವಿದಂತೆಯುಂ ಕಸಂ ಸಿಲ್ಕಿ
ದಂತೆಯುಂ ಮುಳ್‌ನಾಂಟಿದಂತೆಯುಂ ಕಲ್‌ಪೊರಳ್ಚಿದಂತೆಯುಂ
ಕುತ್ತಂ ಬಿಗಡಿಸಿದಂತೆಯುಂ ಕಂಬನಿವೊನಲಂ ಕರೆದು, ಬಸಂಗೆಟ್ಟು,
ಮೆಯ್ಮರೆದು, ಚೇತರಿಸಿ, ನಿಟ್ಟುಸಿರಿಟ್ಟು, ತನ್ನ ಕೀಳ್ಗೆಯ್ಮೆಗೆ ತಾನೆ
ಮರುಕಂದಾಳ್ದು, ಬಳಿಕ್ಕಂ ನೆಗಳ್ತೆಯರಿವುಂ ದೊರೆಕೊಳೆ ಮುನಿ
ಗಿಂತೆಂಗುಂ—

ಕಂದ ॥ ಉಳಿಸುವೊಡಮಳಿಸುವೊಡಮಾ
ನಳಿನಾಂಬಕ-ಶೂಲಿ-ಭಕ್ತ ನಿನಗಾಯತ್ತಂ ॥
ಬಳವತ್-ಪಾಪನ ನಯನಂ!
ಗಳೊಳೀಕ್ಷಿಸಲಾಯ್ತು ಪೂರ್ವ ಫಲದಿಂ ನಿನ್ನಂ ॥೨೨॥

ಅಳಿವಪ್ಪೊಡೆ ಸುರಮುನಿಪಂ
ಬಳಿಗೇಕೆಯೊ ಬರ್ಕುಮೀವನ ದರ್ಶನದಿಂದಂ ||
ಅಳಿವಳಿಗುಂ ವೆರಮೇಂ ಪು
ಚ್ಚಳಿಯಪ್ಪುದೆ ಬೆಳೆವ ಬೆಳೆಗೆ ಮಳೆಯಿಂದೆಂದುಂ ||೨೩||

ಗದ್ಯ || ಎಂದಾತಂ ಮನದೊಳ್ ಪರಿಭಾವಿಸಿ—

ಕಂದ|| ಎಂತಾದೊಡಮೂಂ ನಿನ್ನಂ
ಪಿಂತವಗಣಿಸಿರ್ದ ತಪ್ಪ ಮನ್ನಿಸುತೀಗಳ್ ||
ಸಂತಸದಿನನುಗ್ರಹಿಪುದು
ಸಂತನೆ ಎನೆ ನಾಣನರಿವುದೇ ಆರ್ತಜನಂ ? ||೨೪||

ಗದ್ಯ || ಆಗಳಾ ಬ್ರಹ್ಮಪುತ್ರಂ ಲೋಕಕಲ್ಯಾಣಚಿತ್ತಂ ಸುಲಭೋದಿತ ದಯಾ-ರಸಾರ್ದ್ರ- ಹೃದಯನಾಗಿಯಾ ಖೇಚರಂಗೆ ಧೈರ್ಯಮನೊರೆದು ತನ್ನಳಿವುಳಿವಿಂಗೆ ತಾನೆ ಕಾರಣನೆಂಬುದರಿಂದೆಯುಂ ಬರ್ದನೆ ಪರಮನೆಂಬುದರಿಂದೆಯುಂ- ಶ್ರೀ ಕೃಷ್ಣನತ್ತಣಿಂ ಕ್ಷಮೆಬೇಡು-ಆತನ ಪೂಜ್ಕೆಯೊಳೇನಾನುಂ ಬರ್ದುಂಕಲೆಡೆಯಿರ್ಕುಂ-ದೇವನಂ ನಂಬಲಾವುದುಂ ಬಗೆಗೊಡಗುರ್ಂ-ಎಂದು ಕರ್ತವ್ಯಮನೊರೆದು ಪರಸಿ – ಕರಧೃತ-ವೀಣಾ-ಗಾನ-ಮಿಳಿತ-ನೃತ್ಯಂ ಜಯ-ಸ್ತೋತ್ರನಾಗಿಯಾ ವಿಯತ್ತಳಕ್ಕೆ ನೆಗೆದೆಯ್ದುವುದುಂ- ಗಯನತ್ಯಂತಾಕುಲಚಿತ್ತನಾಗಿಂತೆಂದಂ—

ಕಂದ || ತೋಷಿತನೊಳ್ ಬಹುಚಿಂತಾ
ದೂಷಿತನೊಳ್ ಮಮತೆ-ದೈನ್ಯವೊಪ್ಪದು ಬಹುಧಾ ||
ತೋಷಿತನೇಗಳ್ ಚಿಂತಾ
ದೂಷಿತನೀ ನುಡಿಗೆ ಗಯನುದಾಹೃತನಲ್ತೇ ||೨೫||

ಓವುತ್ತೇಕಳಕಾವತೀ-ವಿಭವದಿಂ ಸೊಕ್ಕೇರಿತೋ ತಂದೆಗಳ್
ಶಾವೆಂದೊಳ್ಪಿನ ಮಾತನೇಕೆ ಪಿಡಿಯಂ ಮೆಯ್ಯಾರಿ ಗೋಳಾಯ್ಲನೆಂ ||
ದಾವೈಮಾನವನೇಕೆ ಬಿಟ್ಟನುಳಿದಗ್ಘಾರ್ಘಪತ್ರನೇಂ ಲೆಕ್ಕಿಸಂ
ಭೂವ್ಯೆಹಾಳಿಯ ಗೆಯ್ದನೇಕೆ ಗಯನೇಕೀ ಬನ್ನಮಂ ಪೊತ್ತನೋ||೨೬||

ಗದ್ಯ || ಎಂದು ತನ್ನನೆ ಸಂಬೋಧಿಸಿ ಮರುಗಿ ಪುದಿದದವಳಲಿಂ ಕುದಿವು ದ್ವಾರಾವತೀ-ಪುರೋಪವನಮಂ ಪೊಕ್ಕು ರುದ್ರರೂಪನಪ್ಪ ಗೋಪಾಲಕೃಷ್ಣನಡಿಗೆ ಶರಣೆಂದು ನೀಡುಂ ಮೊಳ್ಗಿ ತನ್ನ ಗೆಯ್ದ ತಪ್ಪಂ ನೆನೆದು ಪಲತೆರದಿನಾ ಶರಣಾಗತ-ರಕ್ಷಕನಂ ನುತಿಸಿ—

ಕಂದ|| ಎನ್ನರುಮಂ ಮರೆವೊಕ್ಕರ
ಮನ್ನಣೆಯಿಂ ಕಾವ ಬಿರುದರೆರೆಯನೆ ದಯೆಯಿಂ ||
ದೆನ್ನಂ ಕಾಯನುಪಮಗುಣ
ಎನ್ನಂ ಪೊರೆ ಸಲಹು ದೇವ ದೇವೆಂಬಿನೆಗಂ ||೨೭||

ಗದ್ಯ || ನೀನಿನ್ನೇಗೆಯ್ದೊಡಮಪ್ಪುದು ತಪ್ಪದು – ಮೇಣೆನ್ನ ಪೂಣ್ದ ಪೂಣ್ಕೆ ಬಂಜೆಯಾಗದು–ಪೆರತೇಂ ಕಾವರನರಸಿ ಮರೆವುಗು ಪೋಗೆಂದಟ್ಟಿದಂ—

ವಾಣೀಸಂಪನ-ಧೈರ್ಯ-ವಾಗುದಕಮಾ ಚಿಂತಾಗ್ನಿಯಂ ತೊಯ್ದೊಡಂ
ವಾಣೀನಾಥಪಿತುರ್ವಚಸ್ತತಿ ಪುನಃ ಪ್ರಾಜ್ವಲ್ಯಮಂ ಮಾಡೆ ನಿ ||
ರ್ವಾಣಾಲಾತ-ಸಶೇಷ-ವಹ್ನಿಯನಿಲಾಘಾತಕ್ಕೆ ಪಕ್ಕಾದವೋಲ್
ಪ್ರಾಣ-ತ್ರಾಣ-ಸಮರ್ಥತಾ-ಹತಿಯನೇ ತಾಳ್ದಿರ್ದನಂತಾ ಗಯಂ||೨೮||

ಕಂದ|| ಆವಂ ಕಾವಂ ಜಗವಂ
ಕಾವಂ ಕೊಲ್ವೆಂ ದಲೆಂದ ಬಳಿಕಾನೇವೆಂ ||
ಕಾವರ ಮರೆವುಗು-ಎಂಬುದು
ನೋವೊಗೆಯಿಪ ನೆರನಮಾತೆ ನೆರವಿನ ಮಾತೇ ||೨೯||

ಗದ್ಯ || ಎಂದು ಕಿಂಕರ್ತವ್ಯ-ವಿಮೂಢನಾಗಿ ನೊಂದು ಬಿನ್ನನಾ ಳೋಚಿಸಿ ಪೊಗಳ್ತೆಯಱಿವಂ ಪಡೆದು ಬಲ್ಲರರಿತದಿಂ ಮರುಕಮೇ ಜರೆಯೆಂದದಂ ಜರೆದು-ದೇವನಂ ನಂಬುವುದೆಂಬ ಮುನಿವಾ ಗ್ರತ್ನಮಂ ಬೆಲೆಗಟ್ಟೆಯುವೋಘಚಿತ್ತಂ ಗಯಂ ಮಂಗಳಮನೊಡ ರ್ಚುವ ಸರ್ವಮಂಗಳಾಲಿಂಗಿತನಂ ಗಂಗೋತ್ತಮಾಂಗನಂ ಪಂಚ ಲಿಂಗನಂ ಮನೋಮಂದಿರದೊಳ್ ನಿಲಿಸುತ್ತೆ ವೆಳ್ಪಿವೆಟ್ಟಮಂ ಗುರಿ ಮಾಡಿ ಬರಿವಗೆಯುದೊಂದು ಕುಂಬಾರವನೆಯಂಗಣದೊಳ್—

ಕಂದ||   ಉರದಿಂ ಕಾಕಂ ಕೋಳಿಯ
ಮರಿಯೊಂದಂ ಕೊಳ್ಳೆಗೆಯ್ಯಲೆನುತುಂ ಭರದಿಂ ||
ದೆರಗುವುದಂ ಕಂಡೊಡನಾ
ಮರಿ ತಾಯ್ಗರಿವೊಕ್ಕು ತನ್ನಸುಳಿಸಿದುದಾಗಳ್ ||೩೦||

ಗದ್ಯ|| ಅದಂ ಗಯನೀಕ್ಷಿಸಿ ದುರ್ಬಳಮಪ್ಪ ಮರಿ ಸ್ವಪ್ರಯತ್ನದಿಂ ಯೋಗ್ಯೋಪಾಯದಿಂ ಬರ್ದುಂ*ಕಿತೆಂದು ಮುಂಬೋಪುದುಮತ್ತ ಲೊಂದು ನೀರ್ದಾಣದ ಬಳಿಯೊಳ್—

ಕಂದ||   ಹೋರೆತ್ತು ಹಾಯೆ ಭರದಿಂ
ಭೋರನೆ ಬೆಚ್ಚುತ್ತೆ ಬಚ್ಚನೋಡಿ ಕೆಳೆಯು ಬ ||
ಲ್ಪೋರಿಯ ಮರೆಯಂ ಸಾರ್ದೊಡೆ
ಹೋರಿದುವೆರಡಲ್ಲಿ ನೋಯದುಳಿಯಿತು ಬಚ್ಚಂ ||೩೧||

ಗದ್ಯ|| ಈ ಸಂಗತಿಯ ಸಂಕೇತ-ತತ್ವಾರ್ಥಮುಂ ಕಳ್ಕನೆ ಗಯನ ಮನಮಂ ಪುಗುವುದುಂ—

ಬಚ್ಚಂಬೋರಿಯೆನಿಲ್ಲಿ ಕೋಳಿವುರಿಯಲ್ಲಾ ಕಾಗೆಯಿಂ ಬಳ್ದುವಾ
ಬಿಚ್ಚಂದಂ ಬರಿದಾಯ್ತು ಪೊಕ್ಕು ಮರೆಯಂ ಬಾಳೆಂದು ಕಂಸಾಂತಕಂ ॥
ಮೆಚ್ಚಿಂ ಪೇಳ್ದುದನಿಲ್ಲಿಯಿಾ ಪ್ರಕೃತಿಯೋ ಪೇಳ್ಗುಂ ದಿಟಂ ಮುದ್ಧಿತಂ
ಪ್ರೋಚ್ಚಂಬೊತ್ತಿನ ಪೇಳ್ಕೆಯಿಂದೆ ಬಗೆವೆಂ ಸಂಬಿರ್ಪೆನಾನಾತನಂ ॥೩೨॥

ನಿಕ್ಕುವಮಿಾಗಳೆಯ್ದಿ ಬಳಿಕಂ ಮರೆವೊಕ್ಕಡೆ ಬಾಳ್ವದೊಂದು ಸೈ
ಪಕ್ಕುಮುದಂತರಿಂದೆ ಧರಣೀತಳದೊಳ್ ಭುಜಗೇಂದ್ರಲೋಕದೊಳ್ ॥
ವಿಕ್ಕಿನ ನಾಕದೊಳ್ ದೊರೆಯುಂರಾವಗಮಾರ್ಪನೆನಿಪ್ಪನಂ ಶರ
ಣ್ಪೊಕ್ಕಪೆನಂತಕಾಂತಕನ ಶಂಕರನಂ ಶಿವನಂ ಮಹೇಶನಂ ॥೩೩॥

ಗದ್ಯ ॥ ಎಂದು ತರಿಸಂದು ಮನೋವೇಗದ ನಿಡುವಯಣದಿಂ ಪಲವುಂ ನಾಳ್ಗಳಂ ಪೇರಡವಿಗಳಂ ಕಳಿದು ಬೆಳ್ಳಿವೆಟ್ಟದೆಡೆಗೆ ಬರೆವರೆ—

ಕಂದ॥ ಆಡುವ ಕಿನ್ನರಿಯರ ನಿ
ಟ್ಟೋಡುವ ಕಾಳ್ಮರೆಯ ನೆರೆವ ವಾರಣಘಟೆಯಾ ॥
ಪೂಡಿ ಧನುವಂ ಚರಿಪ ಬಿರು
ವೇಡರ ಪಿಂಡೊಪ್ಪೆ ತಪ್ಪಲೊಪ್ಪಿದುದದರಾ ॥೩೪॥

ಗಂಗಾ–ಶೀಕರ–ಸಿಕ್ತನುತ್ತಮ–ವಿಭೂತಿಪ್ರೇಮಿ ಪನ್ನಂಗದಿಂ
ಶೃಂಗಾರಂ ಹತಶಂಬರಾರಿಯಚಲಂ ಗೌರಾತ್ಮದೇಹಂ ಗುಹೋ ॥
ತ್ತುಂಗಂ ನಿತ್ಯಸುಮಂಗಳಾಯತನನೇಗಳ್ ಭೂತನಾಥಾನ್ವಿತಂ
ತಾಂ ಗಂಧರ್ವಸುಕೀರ್ತಿತಂ ಹರನವೊಲ್ ಶತ್ಪರ್ವತಂ ರಂಜಿಕುಂ॥೩೫॥

ಗಸಣಿಗಳಿಂದೆ ಕೂಡಿದ ಮಹೋನ್ನತಮಪ್ಪ ಹಿಮಾಳಿಯಿಂ ಪೊದ
ಳ್ದಿಸೆಡೆವಾರಿಸೈವಲಡೆ ಜಾರುವ ಬೆಳ್ವಳಿಕಿಂದ ಮೊಪ್ಪುವಾ ॥
ಪೊಸನಡೆದಾರಿಯುಳ್ಳ ಬಿಳಿವೆಟ್ಟ ಗಯಂಗದು ಪುಟ್ಟತಿಟ್ಟಿನಲ್
ತಿಸುಳಿಯ ಮೈಮೆಯಿಂದಡರ್ದ*ನಾ ಗಿರಿಯಂ ಪರಮೇಶಭಕ್ತಿಯಿಂ॥೩೬॥

ಮುಳಿಸುಪಗೆಗಳಂ ಬಿಟ್ಟಿರ್ಪುವೆತ್ತಂ ಮಿಗಂಗಳ್
ಫಳಿತ-ತರು-ಸಮೇತಂಗಳ್ ತಪಃಕಾನನಂಗಳ್ ||
ಬಳೆದ ತವಸಿನಿಂದಂ ಧ್ಯಾನದಾನಂದದಿಂದಂ
ಚಳಿಸದ ಬಗೆಯಿಂದಲ್ಲಿರ್ಪುದಾ ಯೋಗಿವೃಂದಂ ||೩೭||

ಸುರಭೂಮಿರುಹಮೇ ತಪೋವನ-ಮಹೀಜಂ ಧೇನುವೇ ಗೋಚಯಂ
ಪರುಷಂ ಪೇರರೆ ಬೆಳ್ಳಿಯೊಪ್ಪುವ ನೆಲಂ ನಲ್ಕೇಕೆಯುಂ ಸೋಗೆಯುಂ
ಪಿರಿದಪ್ಪಳ್ಕರ ಮಂಕಡಂಗಳನಿಶಂ ಸಂದಾ ತಪೋರಾಜ್ಯದೊಳ್
ಹರಭಕ್ತರ್ ಕಡುಜೋಗದೊಳ್ ಮೆರೆವಿನಂ ಬೀಯುಕ್ಕವೇಂ
ಬೇಳ್ಕುಮೆ ||೩೮||

ಕಂದ || ಸದೆನದಿನುನ್ನತ-ಗಿರಿಯು
ಗ್ರದತ್ತಣಿಂ ಬಕುತರೆರೆದುದಂ ಕುಡಲಿಳುವಾ ||
ಸದಯ-ಶಿವಂಗಿದು ಪಥಮೆನೆ
ವಿದಿತ-ತಪೋಧೂಮಮೂವಗಂ ಮುನಿವನದೊಳ್ ||೩೯||

ಅದು ತಪ್ಪಿದು ನೇರ್ಪದು ಸ
ಸಲ್ಲದು ಸಲ್ಲುಂ ಕೇಳನರ್ಥಮದುವಿದು ಸಾರ್ಥಂ ||
ಅದು ದೋಷಮಿದೇ ಪುಣ್ಯ
ಪ್ರದಮೆಂಗುಂ ಬಾಸೆವಕ್ಕಿ ರಿಸಿಬನದೆಡೆಯೊಳ್ ||೪೦||

ಕಪಿಗಳ್ ಪಳಾಶ ಸಮಿಧಾ
ಸುಫಳ-ಕುಶೌದುಂಬರಾದಿಯಂ ತಂದೀಗುಂ ||
ತಪಿಪರ್ಗಿಂಧನಮೀಗುಂ
ದ್ವಿಪಂಗಳಾ ವನದೆ ತಪದ ಮಹಿಮೆಯಿನಲ್ತೇ ||೪೧||

ಎಸೆಗುಂ ಬಚ್ಚಣೆಗೆಯ್ದವೋಲಮರ್ದಿ*ನಿಂ ರೋಮಾಳಿ ಪೂವಿಲ್ಲ ತುಂ
ಡಿಸಿದಂತಾ ನಿರಿಗೊಂಡಪುರ್ವು ಸೆರೆಗಳ್ ಷಡ್ವೈರಿಯಂ ಕಟ್ಟಿದಾ ||
ಪೊಸವಗ್ಗಂಗಳಂ ಮಾಳ್ಕೆಯಿಂ ತಪದೆ ಮೇಲೆಳ್ದಿಲ್ವುಗಳ್ ಧ್ಯೇಯದೊಳ್
ಜೆಸೆವಂತೇರೆ ಮನಕ್ಕೆ ಮೆಟ್ಟಿನೆ ತಪೋನಿಷ್ಠಾಪಿತ-ಸ್ವಾಂತರಾ ||೪೨||

ಗದ್ಯ || ಮತ್ತಮುಲ್ಲೊಂದಸುಗೆಯಡಿಯೊಳ್ ಕಿತ್ತಡಿಮುದುಕನೋರ್ವಂ–

(ಮಹಸ್ರಗ್ಧರಾವೃತ್ತ)

ಋಜುದೇಹಂ ನೀಳೆ ಪದ್ಮಾಸನದೊಳಚಲಿತಂ ಪುತ್ರಮೆಳ್ದಪ್ಪೆ ಜೇಂಬುಳ್
ನಿಜಗೇಹಂ ಮಾಡಿ ಮೂಗಿಂ ನೆಗೆಯುತುಮಿರೆ ತನ್ನಾಸಿಕಾಗ್ರಸ್ಥದೃಷ್ಟಿ||
ಧ್ವಜನೋರ್ವಂ ಬಾಹ್ಯರಾಗಂಗಳನುಳಿದೆಸೆದಂ ಯೋಗದೊಳ್
ನಿರ್ಮಲಂ ಯೋ
ಗಿಜನಾಚಾರಂ ಮಹಾಮುಕ್ತಿಯ ಘನಪದವೀ-ಪೀಠದಾ
ರೋಹಮುಕ್ತೀ ||೪೩||

ಗದ್ಯ || ಮತ್ತಂ ಪೆರತೊಂದೆಡೆಯೊಳೊಂದು ಪಾಲ್ಮರನಡಿಯೊಳುನ್ನತ ಸ್ಫಟಿಕಗ್ರಾವದೊಳಾಸನಂ ಮಾಡಿ– ಕೆಂಜೆಡೆಯನಂ ಜಿತೇಂದ್ರಿಯತ್ವದಿಂ ಪೂಜಿಸಿ ಸೂಡಿದ ಚೆಂದಾವರೆಯೆಸಳಿಂದೊಪ್ಪುವ ಕೆಂಜೆಡೆಯಿಂ–ಪಂಚಾನನ ಸಪರ್ಯಾ-ಮಂತ್ರೋಚ್ಚಾರಣಾನಿಯಂತ್ರಣ-ಗಂಭೀರಧ್ವನಿ-ಪ್ರಕಟನಾನನದಿಂ-ಶಿವಪೂಜಾ-ಪುಷ್ಪರಜೋ-ರಾಜಿತ-ಹಸ್ತೋದ್ಯಮನ-ಗಣಿತಮಾದುದರಿಂ ಕೆಂಪಾಗಿ ನೀರಜಚುಂಬಿತಾಳಿಮಾಲೆಯಂತೆಸೆದು ತೆಗಲೆಯ ಬೂದಿಯನೊರಸುವ ಜಪಮಾಲೆಯಿಂದೆಸೆವ ತೋರಗೊರಲಿಂ–ಹಸ್ತಮುದ್ರೋದ್ಯಮನ-ಚಾಲಿತ-ಪರಿಪೂತ ಪಾಣಿಯಿಂ-ತ್ರೈರಾತ್ರಹಾರಾಮೋಹ ಕೃಶೋದರದಿಂ-ರಕ್ತ

ಪಲ್ಲವಾಸನಾಂತರೋನ್ನತಾಸ್ಪೃಷ್ಟ-ರಾಜಿತ-ಪಾದದಿಂದೆಸೆವ ಪ-ರ
ಲೌಕಿಕಜ್ಞಾನಿಯಿರ್ದನವನೊತ್ತಿನೊಳ್— ರಿಪುದಂಡನಾ-ಸಮರ್ಥ
ಮಪ್ಪ ಜೋಗದಂಡಮುಂ- ಕಡುದವಸಿಂ ಮರುವುಟ್ಟಂ ಸುಟ್ಟಿ
ಸುಟ್ಟು ಬೂದಿಗೆಯ್ದು ಕುರುಪೆನಿಸದ ಬೂದಿಮರಿಗೆಯುಂ—
ಪುಣ್ಯಾಂಬುಭರಿತವಾಗಿ ವೈಮೆಗೆ ಕಂಡಿಯಾದ ತವಸುಗಿಂಡಿ
ಯುಂ—ಚೆಲ್ವಾದ ಜೋಗವಾವುಗೆಯುಮೊಪ್ಪಿರ್ದುವಲ್ಲದೆ —

ಕುಳಗಿರಿ-ಮಧ್ಯದಲ್ಲಿ ಕನಕಾದ್ರಿಯೊ ಬಾನೊಳರಿಲ್ಗಳೊಪ್ಪುವ
ಲ್ಲೊಳವೆರೆಯೋ ಪ್ರವಾಳ-ರುಚಿರಾವಳಿ-ಮಧ್ಯದ ರನ್ನವೋಯೆನಲ್ ||
ಬಳಸಿರೆ ಶಿಷ್ಯರೋಳಿಯಚಲಂ ವಿಮಳೋನ್ನತ-ಧರ್ಮನೀತಿಯಂ
ತಿಳಿಪುವನೊಪ್ಪಿದಂ ವಿಮಳಿನಂ ಪರಿಭಾಷಿತ-ತೇಜನಗ್ನಿವೋಲ್ ||೪೪||

ಕಂದ || ಇನ್ನರ್ ನೋಡಿದ ಮಾತ್ರದೆ
ಯುನ್ನತಿಯುಂ ಬನ್ನದಳಿವುವೊಲ್ದೊಡೆ ಮತ್ತಾ ||
ರೆನ್ನನ್ನರೆನುತೆ ಖಚರಂ
ಮುನ್ನಮೆ ಕಡುಬಕುತಿಯಿಂದೆ ಪಾದಕೆ ಮಣಿದಂ ||೪೫||

ಗದ್ಯ:|| ಅಂತು ಮಣಿದು ತನಗಂ ತಕ್ಕುದನುಪದೇಶಂ ಗೆಯ್ದು
ಪರಸುವುದೆಂದು ಭಕ್ತಿಯಿಂ ಕೈಮುಗಿದನನಾಗಳಾ ಅಮಾನುಷ
ದಯಾರಸಾರ್ದ್ರಮಾನಸಂ- ಮುನಿಜನಮನಸ್ಸರೋಜಮಾನಸಂ-
ಮುನಿನಾಥನಾತನಂ ಕಿರಿದೆಡೆ ಕುಳ್ಳಿರವೇಳ್ದು ಮತ್ತಂ ಕಿರಿದರೊಳೆ
ಪಿರಿದನರಿಪಲ್ ಬಗೆದೆಂದಂ—

ಕಂದ || ಹಿತದಹಿತದ ತಗುನತಗದೊ
ಳ್ಳಿತು ಕೆಟ್ಟುದ ಬಿಡುವ ಪಿಡಿವ ಕಜ್ಜಮನರಿವಾ ||
ಮತಿಯುತ ಮನುಜಂ ಸ್ವಮನ
ಸ್ಥಿತಿಯಂ ತಿರ್ದುವುದೆ ಪ್ರ*ಥಮ-ಶುದ್ಧಿಯ ಕಾರ್ಯಂ||೪೬

ಶುದ್ಧಯಿಸೆ ಮನೋಭಾವ-ಲ
ಸದ್ದರ್ಪಣಮಂ ಸುಬುದ್ಧಿಗೊಡನೆಯೆ ತೋರ್ಕುಂ ||
ಶುದ್ಧಾತ್ಮಬಿಂಬಮುದರಿಂ
ಶುದ್ಧಯಿಸುವ ವಿಮಲ:ಶೀಲಮಂ ವಿವರಿಸುವೆಂ ||೪೭||

ದೇವನದೃಶ್ಯಂ ದೃಶ್ಯಂ
ಜೀವಶರೀರಾಶರೀರಮುವನಂಶವಿದಂ ||
ಭಾವಿಸಿ ಸರ್ವೋಚಿತ ಸಮ
ಭಾವದೆ ತನ್ನಂತೆ ಪೆರರನರಿವುದೆ ಶೀಲಂ ||೪೮||

ಹಿತವಿಳಿಗದು ಧರ್ಮಮ
ಹಿತಮಪ್ಪುದಧರ್ಮಮಪ್ಪುದೆಂಬ ವಿವೇಕಂ ||
ಜಿತರಿಪುವಲ್ಲದ ದುರ್ಮತಿ,
ಮತಿಗೇಂ ತೋರುಗುಮೆ ತೋರ್ದೊಡಂ ಕೃತಿಗುಂಟೇ ||೪೯||

ನ್ಯಾಯಮನೆ ಪಿಡಿದು ಸತ್ಯಾ
ಧ್ಯಾಯದೊಳಡಿಯಿಟ್ಟು ಚಾಗಮಂ ತಾಳ್ಮೆಯುಮಂ ||
ಆಯುತೆ ದೇವ-ಪ್ರಿಯನ
ಕ್ಕಾಯತ-ಮತಿ, ನಿರ್ಮಲಾಂತರಂಗಂ ಮನುಜಂ ||೫೦||

ಗದ್ಯ || ಎಂದಾ ತಪೋಧನಂ ಸಾರ್ವಕಾಲಿಕಮುಂ ಸಾರ್ವತ್ರಿಕಮುಂ ಸಾರ್ವಜನಿಕಮುಂ ಸಂಗೃಹೀತಮುಮಪ್ಪ ನೀತಿಯನರುಪಿ ಚಿತ್ತಜಹರಂ ನಿನ್ನ ಚಿತ್ತಕ್ಕೊಡರ್ಚುಗೆ ಸುಬಮನೆಂದು ಪರಸಿ ಕಳುಪಲೊಡಂ—

ಕಂದ || ಅಡಿಗಡಿಗೆ ನೆನೆಯುತುಂ ಬೆ
ಳ್ಕಡಿಯನನಲ್ಲಲ್ಲಿ ಮೆರೆವ ರಿಸಿಬನದೆ ತಪಂ ||
ಬಡುವರಿಕೆಯ ಕಿತ್ತಡಿಗಳ
ನೊಡನೀಕ್ಷಿಸುತಂ ಗಿರೀಶನಿರ್ಪೆಡೆಗೆ ಗಯಂ ||೫೧||

ಗದ್ಯ || ಅಂತು ಬರುತುಂ ಪೊರ ಅಂಗಣದಿಂದನು ಕಾನುದನಪ್ರ ಸೋಮನಂ ಭಕ್ತಿಮನನಾಗಿ ಸ್ತುತಿಯಿಸಿದನದೆಂತೆನೆ—

ನಾನಾಬ್ರಹ್ಮಾಂಡಮಂ ಸಂಜನಿಯಿಸ ಪೊರೆವಾ ನಾಶನಂಗೆಯ್ವ ವಾಗ್ದೇ
ವೀನಾಥಂ ಶ್ರೀವರಂ ಪಾರ್ವತಿಯವರನುವಿಾ ಮೂವರ್ಗಂ
ನಿನ್ನ ಲೀಲಾ ||
ನೂನಾನುಷ್ಠಾನದಿಂದಂ ಜನಿಸಿರೆ ತಿರೆಯೊಳ್ ಬಾಳ್ವ
ದುತ್ಕೃಷ್ಟ-ಧರ್ಮಾ
ನೀನಾ ತ್ರೈಮೂರ್ತಿಗಳ್ಗಂ ಬೆಸಸುವನರಿತೆಂ ನಂಬಿದೆಂ ನಿನ್ನನೀಗಳ್||೫೨

ಆಕಾರಾದ್ಬಾಹ್ಯನೆಂದುಂ ವಿಗತ-ಭವ-ಭಯಾನೀಕನೆಂದುಂ ಸ್ವಬಾಹ್ಯಾ
ಲೋಕಾತೀತಾಂಗನೆಂದುಂ ಗುಣವಿರಹಿತನೆಂದುಂ
ಮಹಾಯೋಗಿಗಳ್ ಜ್ಞ ||
ನಾಕಾಶಾಂತರ್ಯದೊಳ್ ನಿನ್ನದು ದಿಟವರಿಜಂ ದ್ಯೋತಿಪಂ
ಕಾಂಬರೆಂಬರ್
ಸಾಕಾರಂ ಭಕ್ತವರ್ಗಕ್ಕೆನಿಪ-ಮಹಿಮನೇ ನಂಬಿದೆಂ ನಿನ್ನನೀಗಳ್||೫೩||

ಭವಕೀಲಾಲನಿಧಾನದೊಳ್ ನೆಗೆವ ಭಂಗಾಕೀರ್ಣ-ಸಂತೋಷದಿಂ
ಕವಿದುಂ ಮತ್ತದರಿಂ ಬಳಲ್ದು ಬಳಿಯಿಂದುದ್ಧಾರ ಸಂಗೊಂಬ ಚಾ ||
ರುವಿವೇಕಂ ಬಡೆದಂದು ನಿನ್ನ ಪದಮಂ ಜೀವಾಳಿ ಮೇಣ್ ಸಾರ್ದೊಡಾ
ಭವಮಂ ಪಿಂಗಿಪ ದೇವ ನೀನಭವನೈ ಭಕ್ತಾರ್ತಿವಿಧ್ವಂಸನಯ್ ||೫೪||

ಕಂದ ||
ಬುಸುಗುಟ್ಟುವ ಬಿಸದೆಲರುಣಿ
ಪೊಸಪಚ್ಚಮುದಾಗೆ ಪೆಗಲನೇರ್ದೊಡೆಯುಂ ನೀಂ ||
ಮಸಗದೆ ಸಲೆ ಪೇಸದೆ ಕೇ
ಡೆಸಗದೆ ತಾಳ್ದಿರ್ದ ಪಾಂಗು ಪೆರರ್ಗ*ರಿದಲ್ತೇ ||೫೫||

ಅಚ್ಚಿಯ ಕಿರ್ಚಿಂ ಚುರ್ಚಿದೆ
ಯಿಚ್ಚೆಗನಂ ಮಿಳ್ತುವಂ ಮಿಕಂಡಣುಗನ ಕಾ ||
ವಿಚ್ಚೆಯಿನಳಿದೈ ನಿನ್ನಂ
ನಚ್ಚಿದರ್ಗೇ*ಂ ಬರ್ಪುದೊಂದು ಪುಚ್ಚಳಿಯುಂಟೇ ||೫೬||

(ಶಾರ್ದೂಲವಿಕ್ರೀಡಿತವೃತ್ತ)

ಗಿರಿಯೊಳ್ ನಿಂದೊಡಮೆಲ್ಲರಂ ಸಲಪುವೈ ಚರ್ಮಾಂಬರೋಪೇತನಾ
ಗಿರೆಯುಂ ಚಾರುದುಕೂಲ-ದಾನಗುಣನೈ ಪನ್ನಂಗದಿಂ ಭೂಷ್ಯನಾ ||
ಗಿರೆಯುಂ ದಿವ್ಯವಿಭೂಷಣಂಗುಡುವನೈ ಸಂಪತ್ತಿಯಿಂ ಬಾಹ್ಯನಾ
ಗಿರೆಯುಂ ಬೇಳ್ಪುದನೀವನೈ ಮರುಳಕೂಡಿರ್ದುಂ ಸದಾಕಾಂಕ್ಷ್ಯನೈ||೫೭

ನಿನ್ನೊಂದಕ್ಕರಮುಂ ಸಮುಚ್ಚರಿಸಿದಂ ನಿಷ್ಪಾಪನೈ ಭಕ್ತಿಯಿಂ
ನಿನ್ನಾ ನಾಮುವ ಪಾಡಿದಂ ಸುಕೃತವಂತಂ ಮುಕ್ತಿಯುಂ ಪೊಂದುವಂ ||
ನಿನ್ನಂ ಸನ್ನುತಿಪಂ ಸುಸಾಧುಗುಣನೈ ಸತ್ಕಾರ್ಯ-ಸಂಸಿದ್ಧನೇಂ
ನಿನ್ನಿಂ ರಕ್ಷಿತನಲ್ತೆ ನಿನ್ನಯ ಮಹತ್ವಂ ದೇವ ಸಾಮಾನ್ಯಮೇ ||೫೮||

ಪೊಗಳಲ್ ಶೇಷನ ಜಿಹ್ವೆಯುಂ ಗ್ರಹಿಸೆ ವಾಣೀಬುದ್ಧಿಯುಂ ಲೇಖಿಸಲ್
ನೆಗಳ್ದಾ*ಬಾಣನ ಪಾಣಿಯುಂ ಮಸಿಯದೊಂದಂಭೋಧಿಯುಂ ಲೆಕ್ಕಣಿ
ಕ್ಕೆಗಳೀ ಲೋಕದೊಳುಳ್ಳವುಂ ಬರೆಯೆ ಬಾನುಂ ಸಾಲದಾ ನಿನ್ನ ಕೀ
ರ್ತಿಗಳಂ ಬಣ್ಣಿಸಲಾರ್ಪನೇನರಿತನಯ್ ನೀನೆನ್ನ ಸರ್ವಾರ್ಥವಂ ||೫೯||

( ಅರಲರಗಳೆ)

ಜಯ ಕೇವಲಾನಂದ ವಿಮಳ-ಹೃದಯ
ಜಯ ಶಮನ ಶಮನ ಸದ್ವಿಲಸಿತ-ದಯ |
ಜಯ ವರ-ಪ್ರದ ಮುದದ ಕರುಣಿ ಶಿವನೇ
ಜಯ ಕೃತಾಖಿಳ-ಪುಣ್ಯ-ಭವನ ಭವನೇ ||
ಜಯ ತನುದ್ಯುತಿ-ಜಿತಾಮಿತ-ಶಶಿ ರವಿ
ಜಯ ವಿಗತ-ತಾಪನೇ ಖಳ-ಗಿರಿ-ಪವಿ
ಜಯ ದುರಂತ-ತಿಮಿರ ರವಿ-ಕಿರಣ ಚರಣ
ಜಯತಿ ಧೃತಾ ಖಿಳ-ಸುಗುಣ ಶರಣ-ಭರಣ ||
ಜಯ ಸುಖವಿತತಿ-ನುರುತ-ನಿಲಯ-ಮಲಯ
ಜಯ ಮುನಿಗಣ-ಧ್ಯಾನ-ಹೃದಯ-ನಿಲಯ |
ಜಯ ಶಿರೋಧೃತ-ನದಿಯೆ ಧರೆಗೆ ಹಿತನೇ
ಜಯ ಲೋಕಹಿತ-ಶೀತ-ಕಿರಣ ಯುತನೇ ||
ಜಯ ಮಂಗಳಾರ್ಧಾಂಗ ಹಸಿತ ವದನ
ಜಯ ಸಪ್ರಸಾದ-ವದನ ಗಜವದನ
ಜಯ ಯಕ್ಷ-ಕಿನ್ನರ-ಸ್ತುತನೆ ಹರನೆ
ಜಯ ದೇವ ಮೆಯ್ದೋರ್ವುದಭಯ ಕರನೆ ||೬೦||

ಗದ್ಯ || ಎಂದಚಂಚಲ-ಚಿತ್ತದಿಂ ನುತಿಪ ನುತಿಯಾ ಚಿತ್ತಜಾರಾತಿಯ ಚಿತ್ತಮಂ ಸೆಳೆವುದುಂ —

ಹರಿಯೆನ್ನಂಶಜನೊಳ್ಪುದರ್ ಮೆರೆವಿನಂ ಕೃಷ್ಣಾಖ್ಯೆಯಿಂ ಪುಟ್ಟಿ ದು
ಷ್ಟರನುನ್ಮೂಲಿಸುತಲ್ಲಿ ಭಾರತ-ಮಹಾ-ಸಂಗ್ರಾಮದೊಳ್ ನೇಹಿಗಂ ||
ನರನಿಂದೆಯ್ದೆ ಪೊಣರ್ಚಿಸಲ್ಕವನ ಬಲ್ಪುಂ ಸಾಸಮುಂ ಶೌರ್ಯಮು
ಗ್ರರಣಾಟೋಪಮದೆಂತುಟೆಂದರಿಯಲೀ ಭೂಭಾಗದೊಳ್
ಕಾಂಕ್ಷಿಪಂ ||೬೧||

ಗದ್ಯ ॥ ಅದರಿಂದೀ ಖಚರಸಂದರ್ಭಮಾ ಬಯಕೆಗನುಕೂಲಿಸಿ ದುದು. ಮೇಣೆನಗೀಗಳಾ ಬಯಕೆವಳ್ಳಿಯಂ ಬಳೆಯಿಪ ನೀರೆರೆವೆಡೆ ಕಯ್ಗೂಡಿದುದೆಂದು ಬಗೆದಂದು—

ಕಂದ ॥ ತಲೆಯಾ ಪೊಳೆನೀರ್ ಸೀರ್ದಂ
ದಲೆ ಸಸಿಗದಿರಿಂದೆ ತಾಪಹರ ಸುಧೆಯೆನಿಸಲ್ ॥
ಬಲದೊಳ್ ಸತಿರಂಜಿಸೆ ಮಗ
ನಿಲಿಪೇರಂ ಬೆರಸು ಭವಹರಂ ಕಣ್ಗೆಸೆದಂ ॥೬೨॥

ಅತ್ತಲ್ ಮುನಿಸಂಸ್ತುತಿ ಮ
ತ್ತಿತ್ತಲ್ ಗಾಂಧರ್ವಗಾನ ನಿಸ್ವನತತಿಯು ॥
ಲ್ಲಿತ್ತಲ್ ಜಯತೂರ್ಯರವಂ
ಮುತ್ತಿದುವೊತ್ತಿದುವು ಕುತ್ತಿದುವು ಕಿವಿಯೆಡೆಯಂ ॥೬೩॥

ಕಾಮಿತಮಂ ನತರ್ಗ್ಗೆ ಕುಡೆ ನೀಳ್ದುದು ಕೈ ಹಿತ-ಭಕ್ತ-ಸನ್ನುತಿ
ಸ್ತೋಮಮನಾಲಿಸಲ್ಕಗಲಿತಾ ಕಿವಿ ವಿಘ್ನ ತಮೋ ವಿತಾನ ನಿ ॥
ರ್ನಾಮಮನ ಮಾಡಲಾದುದತಿತೇಜಮಿಮಂಗೆನೆ ದಂತಿವಕ್ತ್ರನಾ
ದಾಮುಹಿಮಂ ಗಣೇಶನೊಡನೊಪ್ಪಿದನುನ್ನತ-ಸಿದ್ಧಿದಾಯಕಂ ॥೬೪॥

ಗದ್ಯ ॥ ಆಗಳ್ ನಿರ್ಭರ ಭಯ ಭರಿತ ಭಕ್ತಿಯಿಂ ನೊಳ್ಗಿದ ರಾಜರಾಜಾತ್ಮಜನಂ ರಾಜೋತ್ತಮಾಂಗಂ ಪಿಡಿದೆಳ್ಚಿಸಿಯಭಯ ಪ್ರದನಾಗಿ—

ಏವಂ ಮಾಣ್ ದ್ವೈತಮೆಂಬಾಟವಿಯೊಳೆಸೆದಪಂ ಸೋದರೋಪೇತ-
ಪಾರ್ಥಂ
ಕಾವಂ ಮದ್ಭಕ್ತಸಾತಂ ತಪಿತ-ಜನ-ಶರಣ್ಯಂ ಮಹಾಸತ್ವವಂತಂ ॥
ಭೂವಿಸ್ತಾರ ಪ್ರಕೀರ್ತ್ಯನ್ವಿತನಭಯಮನ ನೀನಾತನಿಂ ಪೊಂದು ಗರ್ವೋ
ದ್ಭಾವಂ ತ್ವತ್ಪಾಪಮಿಂದೆನ್ನಯೆ ಬಕತಿಯೊಳೇ ಪೋ ಪಡಲ್ಪಟ್ಟ
ದೀಗಳ್ ॥೬೫॥

ಗದ್ಯ ॥ ಎಂಬುದುಂ ಯುಯುತ್ಸುವಾದ ತನ್ನೋಪನೊಳಾ ಪರಾಕ್ರಮಿಯಪ್ಪ ಕಿರೀಟ ಪಿಂದೆಗೆಯದೆ ಕಾದಿದುದಂ ರುದ್ರಾಣಿ ಯುಂ ನೆನೆದು ನಿನಗಿದೊಳ್ಳಿತೆಂದು ತಾನುಮನುಮೋದಿಸೆ—

ಕಂದ ॥ ಎಡರೆಡೆಯೊಳಡಸದಿರ್ಕೆಮ
ನಡೆ ನೀನಾ ಪಾರ್ಥನೆಡೆಗೆ ತಡೆಯೇಕೆಂದಂ ॥
ಎಡಗೇಱಡಿ ತಂದೆ ಶಿವನೊ
ಲ್ವೆಡೆಯೊಳ್ ಮಗನಪ್ಪ ಬೆನಕನೇನೊಲಿಯದನೇ ॥೬೬॥

ಗದ್ಯ॥ ಮತ್ತಂ ವಿಶೇಷ-ಪುರುಷ-ಕಾರ್ಯ-ತತ್ಪರನಪ್ಪಾ ಅಂಬರ ಚರನುಪಪಾದಿತ ದೈವಿಕ-ಪ್ರಸಾದನುಂ ಧ್ವಸ್ತಪಾಪನುಮಾಗಿ—

ದೇವಾವಾಸ-ಗಿರೀಂದ್ರದಿಂದಿಳಿದು ಕಂದರ್ಪಾರಿಯೊಳ್ ತನ್ಮನೋ
ಭಾವಂ ಬೂದಿವೊಲಿರ್ಪಿನಂ ಸುಮತಿ ತತ್ಸಾನ್ನಿಧ್ಯದೊಳ್ ಬೆಳ್ಪಿಯುಂ ॥
ತಾವಾಸಂ ನೆಗಳ್ದಿರ್ಪಿನಂ ನಿಜಶರೀರ-ತ್ರಾಣ-ಚಿತ್ತಾನ್ವಿತಂ
ಶೈವಾನುಗ್ರಹ-ಪಾವಿತ-ತ್ರಿಕರಣಂ ಬಂದಂ ಮಹೋತ್ಸಾಹದಿಂ ॥೬೭॥

ಎಂಬಲ್ಲಿಗೆ ಸತ್ವಾವಲೋಕನ ಕಾವ್ಯದೊಳ್
ಗಯಪರಿಭ್ರಮಣಂ - ಶೈವಾನುಗ್ರಹಂ
ತೃತೀಯಾಶ್ವಾಸಂ



# ಅಭಯಪ್ರದಾನಂ

## ಚತುರ್ಥಾಶ್ವಾಸಂ

ಕಂದ ॥ ಶ್ರೀ ಪರಮೇಶ-ಸ್ತೋತ್ರಾ
ಳಾಪಂ ನಿರ್ದುಷ್ಟನಖಿಳ-ಸೌಜನ್ಯಗುಣಂ ॥
ಗಾಪತ್ತ್ರತಿಯಾವೋದಿತ
ಧೂಪದೆ ದುರ್ಗಂಧದಂತೆ ಕಿಡಿಸಲ್ಪಡೆಗುಂ ॥೧॥

ಗದ್ಯ ॥ ಎಂದು ಪ್ರತ್ಯಯಂ ಬಡೆದು ತದ್-ದ್ವೈತಾರಣ್ಯಮಂ ಗಯಂ ಪುಗುತರ್ಪುದುಂ—

(ಪಿರಿಯಕ್ಕರ)

ಪೆಸೆವೆಣ್ಗಳವೊಗಮಂ ಬಾಸಣಿಸಿ ಕಾರಿರುಳಗ್ಗೈವ ಭೂಮಿರುಹಂಗಳಿಂದಂ
ಪೊಸಮಿಂಚೆಂಬಂತೆ ಬೆಳಗುವ ದಿವ್ಯೌಷಧಿವ್ರಾತದೆ ಭಯಂಕರ ಶಬ್ದದಾ॥
ವಿಸರಂ ಪುಟ್ಟೆ ಗರ್ಜಿಸುವ ಭೀಕರಜಂತು-ವಿತತಿಯಿಂ ದವಿತಭೂರುಹ
ವಲ್ಲಿಯಾ
ಕುಸುಮವ್ರಾತಗಳನ್ಮಧು-ವಾರಿ-ವರ್ಷಗಳಿಂ ವಿಪಿನಂ
ರಾಜಿಕುಮೇಗಳುಂ ॥೨॥

ಗದ್ಯ ॥ ಮತ್ತಂ ಬನರಾಯಂ ಮೇಳಂಬಂಗಳ ಕರ್ಪಿನ ಕಮ್ಮಣ್ಣಿಂ ಮಾಡಿ ಸೂಡೊಳ್ ಬೆಂದಾರಿದೋಡಂ ಮಾಡಿಂಕ್ಕಿಸಿದಂತೆಯುಂ—ವನವಿದ್ಯಾರ್ಥಿ ನಲ್ವರೆಪಕ್ಕಿಳಲೆಗಾಯನಯಃ ಫಳಕದೊಳ್ ತೇದಿದೊಡೆ ಚೆಲ್ಲಿವೋದಂತೆಯುಂ—ವನವಾಸಿಗಳಪ್ಪ ಮುನಿವನಿತೆ

ಯರ್ ಕರ್ಪೂರಸಾರಣೆಗೆಯ್ದಂತೆಯುಂ—ಬನವೆಜ್ಜಂ ಬೇಸಗೆಯ ಮರಕ್ಕೆ ಬಾಡುಂಗುತ್ತಂ ಬಾರದಂತಿರುಳ ತಿರುಳ ಕಸಾಯದಿಂ ಮಿಸಿಸಿದಂತೆಯುಂ—ಬನಮಡಿವಳಂ ಬನರಾಯನ ತಮಾಲ-ನೀಲ-ದುಕೂಲಮಂ ಕರ್ಚಿ ತರ್ವಗ್ರದೊಳಾರಿಸುವಂತೆಯುಂ—ಬನದೇವಿ ಬಿಸುಮೆಯ್ಗುತ್ತದಿಂ ಕಾರ್ಗಂಬಳಿಯಂ ಮುಸುಂಕಿಟ್ಟಂತೆಯುಂ ಕರಂಗಿ ಕಳ್ತಲಿಸಿ ತೋರ್ದುದಲ್ಲದೆಯುಮಲ್ಲಿ—

ಕಂದ ॥ ಪೂಗೊಳನಂ ತಣ್ಗದಿರ್ಗ*ಳ್
ತಾಗದೊಡಂ ತಟದೆ ಬೆಳೆದ ಚಂಪಕಕುಜದಾ ॥
ಪೂಗೊಂಚಲ್ಗಳ್ ಬಿರಿಯಿಪು
ವೇಗಳ್ ಬೆಳ್ಪಿಂದಮಾವಲಂ ತದ್ವನದೊಳ್ ॥೩॥

ಇರುಳಿನ ಪನಿಯುರುಳ್ದ*ರುಳ್ದಾ*
ಮರದೆಲೆಯಿಂ ಪಗಲೊಳಲ್ಲಿ ಬೀಳ್ವುದರಿಂದಂ ॥
ಸಸೀರುಹ-ಮುಕುಳಂಗಳ್
ಬಿರಿವುದಕರಿದಾದುದಲ್ಲಿ ಶರಜಾಕರದೊಳ್ ॥೪॥

ಉರಿಯುತ್ತಿರೆ ಕಾಡುರಿ ವನ
ತರುವಂ ನಿರ್ಯಾಸ-ಧೂಮ-ಗಂಧ- ವ್ಯಾಪ್ತಂ ॥
ತಳದೊಳ್ ವನದೊಳ್ ನೊಳ ನುಸಿ
ಯಿರದಾಯ್ತಾರೋಗ್ಯಕರಮರಣ್ಯಮಗಣ್ಯಂ ॥೫॥

ಗಜತತಿಯ ಮೆಯ್ಗೆ ತದ್ಭೂ
ಮಿಜದ್ರವಂ ಸುರಿಯೆ ತನ್ನ ಕಂಡೂಯನದಿಂ ॥
ಕುಜಮಂ ಘರ್ಷಿಸುತಿರ್ಕುಂ
ನಿಜಮದಮಂ ಮೇರೆಯಿಕಂತೆ ತದ್ವನದೆಡೆಯೊಳ್ ॥೬॥

ತಲೆ ಮುತ್ತು ಪವಳಮುದಿರ್ದೊ*ಣ
ಎಲೆದಳಿರ್ಗಳ್ ಕೇಸರಂಗಳುಂ ಕಡುಕೆಂಕಂ ||
ನಿಲಲಾನೆಗಳಂ ಬನದೊಳ್
ಕೊಲೆಗೆಯ್ಗುಂ ಪೊಡೆದು ರೌದ್ರರಂಹಂ ಸಿಂಹಂ ||೭||

ನಡೆವಾವೆಯಾದೊಡಂ ಕೊಂ
ಡೊಡಲಂ ತಣಿವುಗ್ರ-ಪನ್ನಗಂ ತಪ್ಪನದೊಳ್ ||
ಜಡಜಜನರಿತಾ ಪಕ್ಕಿಯ
ಗಡಣಕ್ಕಾಗಸದೊಳಾಡಮಾಡಿದನಜಡಂ ||೮||

ಗದ್ಯ|| ಅಂತಾರ ಕಣ್ಗಂ ಮನಕಂ ಭಯಾಜನಕಮಪ್ಪಾ ವನದೊಳ ಭೂಮಿಾ ಗಮನ-ಸಮರ್ಥನಪ್ಪ ಗಯಂಬಂದು ಪಾಂಡವನಿವಾಸ ಸ್ಥಾನಮಂ ಕಂಡಚ್ಚರಿವಟ್ಟು—

ಸನಿಯದೊಳಿರ್ದೊಡಂ ಕುದುರೆಗಳ್ ಗರುಡಾಗ್ರಜನುಂ ಪ್ರಚಂಡ-ತೇ
ಜನಬಿಸುಪಿಂಗೆ ಬಾಡದವೊಲೀ ವನ-ದಾರುಣ-ಭೀತಿ-ಸಂಕಟಂ ||
ತನುಮನದಿಂದೆ ಪಾಂಡವರ ಪೊರ್ದದೆ ನಿಂದುದೆನಲ್ಕೆ ನಾಡೆ ಸ
ಜ್ಜನಸಮುದಾಯಕೇಂ ಪ್ರಕೃತಿದೇವಿಯೆ ಸೌಖ್ಯವನೀವಳಲ್ಲಮೇ ||೯||

ಗಿರಿಶೋದ್ಭೂಷಿತ-ಪೂತ-ಶೀತಕರ-ವಂಶೋದ್ಭೂತರಾಕ್ರಾಂತ-ಭೂ
ವರ-ನಾಗೇಂದ್ರ-ಪುರೇಶ-ಜಾತರಖಿಳೋರ್ವೀ-ವ್ಯಾಪ್ತ-ಕೀರ್ತಿ-ಸ್ತವಾ ||
ಕರರೆಂದುಂ ಹರಭಕ್ತರುತ್ತಮಗುಣರ್ ಶ್ರೀಕೃಷ್ಣಚಿತ್ತಪ್ರಿಯರ್
ಬೆರೆತಿರ್ದೆಲ್ಲರರಣ್ಯದೊಳ್ ನೆಲಸುವರ್ ದೈವಾಗ್ರಹಂ ಲಂಘ್ಯಮೇ ||೧೦||

ಫಲಮೂಲಾಭ್ಯವಹಾರಿಗಳ್ ನೃಪಾಸುತಾಲಂಕಾರ ಬಾಹ್ಯರ್ ಮಹೀ
ತಲಶಯ್ಯಾಸಹಿತರ್ ಮೃಗಪ್ರತತಿಸಖ್ಯರ್ ವನ್ಯವಾಸರ್ ಮಹಾ ||
ಬಲಿಗಳ್ ಶೂರರವಾರ್ಯವೀರ್ಯರಿವರೂರ್ಧ್ವಜ್ವಾಲ್ಯಮಂ ನೀಗದಾ
ಜ್ವಲನಂಬೋಲಿವರಲ್ಲಿ ತಾಳ್ದು ಕೆಡುಕಾಂಪಂ ಕೌರವಂ ವೈರವಂ ||೧೧||

ಗದ್ಯ ॥ ಎಂದಾ ಪಾಂಡುಪುತ್ರರಂ ತನ್ನವರಂ ಮೂಳ್ಪಂತಲಂಪಿನಿಂ ದವರ ಸೌಗುಣ್ಯಕ್ಕೆ ಮೆಚ್ಚಿ ತಲೆಯನೊಲೆಯುತ್ತುಂ ಬಂದು ನರಂಗೆ ಪುಯ್ಯಲ್ಚಲ್ ಬಗೆದು—

ಯಮಜಾತಂಗಿದು ಶೂನ್ಯವಾದಪುದೊ ಭೀಮಂಗಂ ತಿರಸ್ಕಾರಮು
ದ್ಯಮಮಾದಪ್ಪುದೊ ಫಲ್ಗುಣಂಗೊಡನಸಹ್ಯಶ್ವಂ ದಲುಂಟಪ್ಪುದೋ ॥
ಯಮಳರ್ಗಂಗವೊ ವಹ್ನಿಜಾತೆ ಬೆರಗಂ ತಾಳ್ದಪ್ಪಳೋ ಎಂಬ ಶಂ
ಕೆ ಮನಕ್ಕಾಗೆ ಕಿರೀಟಿಯೆಕ್ಕಟಿಯನಂದಾ ಖೇಚರಂ ಪಾರಿದಂ ॥೧೨॥

ಕಂದ ॥ ಗಾಳಿಯ ಬಿರುಮಳೆಗೆರಗಿದ
ಬಾಳೆಯವೋಲ್ ದೊಪ್ಪನಡಿಗೆಡೆದು ಕಂಬನಿಗಳ್ ॥
ಬೀಳುತ್ತಿರೆ ಗಯನಂ ನರ
ನೇಳೇಳೇನಾದುದೆಂದು ಬೆಸಗೊಳುತಿರ್ದಂ ॥೧೩॥

ಪೆರ್ಚಿದುದೇಕೆ ಸುಯ್ಯುಲ್ವೆನತಂಘ್ರಿಗಳಂ ಗಳದಶ್ರು-ಧಾರೆಯೋಂ
ಕರ್ಚುವುದಸ್ಫುಟಂ ಪ್ರವಚನಂ ನೆನೆಯುತ್ತೆ ಪರಾಭವಂಗಳಂ ॥
ಬೆರ್ಚುವೆಯೇತರಿಂದೆ ನಿನಗೀ ಪರಿಪಾಡೊದಗಿತ್ತು ನೀನದಾರ್
ಚುರ್ಚುವ ನೋವದೇಂ ಖಚರನಾಗಿರೆ ಬಂದುದದಾವ ಬನ್ನವೋ ॥೧೪॥

ಗದ್ಯ ॥ ಎಂದೊಡಾಂ ಖೇಚರನಪ್ಪ ಗಯನೆನ್ನ ನೆನ್ನವೈರಿ ಕೊಲಲ್ ಸೂರುಳಿಟ್ಟೊಡೆ ಕಾವರನಾರಯುತೆ ಭಗವದ್ಭವಾನೀವಲ್ಲಭನಂ ಕಂಡೊಡಾತಂ ನಿನ್ನ ಕುರುಪುವೇಳ್ದು ಬಳಿಕೆನ್ನನಿಲ್ಲಿಗೆ ಕಳುಪಿದನದರಿಂ ಶರಣನಸುವಂ ಕಾಯುವೇಳ್ಪುದೆನೆ—

ಕಂದ || ತರದಿಂ ವಿವರಿಸು ನಿನ್ನಂ!
ಕರುವಂದದೆ ಕಾವೆ ನೋೞ್ವೆನಾಂ ದುರ್ಗಾ ಶ್ರೀ ||
ವರರಡಿಯಾಣೆಯಿದೋ ಬೆ
ಳ್ಕರದಿರ್ ಶರಣಾಗತರ್ಕಳಂ ಕಾವನೆನಾಂ ||೧೫||

ಅನಕೃತನಹ ನಿನ್ನೊಳದಾ
ವನೆಬಲವತ್-ಕೃತಿ ಮಹಾದವಾಗ್ನಿಯೆನಿಸಲುಂ
ನಿನಗೊಡರವಿಡೆಂ ದಲ್ ಸ್ವವ
ಚನವುಂ ನಡಪುವುದೆ ನಾಡೆ ನಲ್ಲೊಡವಲ್ತೇ ||೧೬||

ಸಸಿಸುಹುಗೆ ನಡೆಗೆ ಬಿಟ್ಟುಂ
ನಿಸೆವಗೆಯಂ ತಣಿಗೆ ಪುಳಿಗೆಯಿಂಗಡಲ ಜಲಂ |
ಸಸಿವಳಿಯೊಳ್ ಜನಿಸಿದ ಸಾ
ಹಸ ಮಹಿಮನ ಪೂಣ್ಕೆ ಬಂಜೆಯೇನಾದಪುದೇ ||೧೭||

ಇಂತೆಂದೊಡಮಾ ಖೇಚರ
ನಂತರ್ಯದಧೀರನಾಗಿ ಮಿಡುಕುತೆ ತಾನಂ
ತಿಂತೇನೆನದಿರೆ ಶೌರ್ಯವ
ಶಂತಾಳ್ದಂ ಘೋರಶಪಥಮುಂ ಕೌಂತೇಯಂ ||೧೮||

ಶಿವಕೇಳ್ ನಂದಕುಮಾರಕೇಳ್ ಕಮಲಜಾ ನೀಂ ಕೇಳ್
ಹಿಮದ್ಯೋತಿಕೇಳ್
ರವಿಕೇಳ್ ಕೇಳ್ವುದು ಪಂಚಭೂತತತಿಯಿಂದೆನ್ನಂ ಶರಣ್ಬೊಕ್ಕನಂ |
ಇವನಂ ಕಾವೆನದಾವೆಯಾದೊಡರಿಯಿಂ ಮೇಣೀ ಪ್ರತಿಜ್ಞಾಕ್ಷರಂ
ತವಿಲಂ ದಾಳ್ದೊಡೆ ಮಾಣದೇರ್ಪಡಿಸಿ ಚುಚರ್ಗಂಗೊಂಡಮುಂ
ಪೊಕ್ಕಪೆಂ ||೧೯||

ಗದ್ಯ॥ ಎಂದು ಮೂಲೋಕಮರಿವಂತೆ ಪೂಣ್ದು ಧೈರ್ಯಮನೊರೆದು ನಿನ್ನ ವೈರಿಯಾರ್ಗೆ ಪೇಳೆನೆ–ಗಯಂ ತನ್ನ ಪರಿಭವ–ಪ್ರಪಂಚ ಮೆಲ್ಲಮಂ ಯಥಾ ವರ್ಣನಂಗೆಯ್ದಾ ವಾಸುದೇವನೆ ತನ್ನ ಪಗೆಯೆಂಬುದುಮುಭಯವನಿತ್ತಾವಿಜಯಂಗುಭಯಸಂಕಟಮೊದಗಿ ಮನಂ ಜುಮ್ಮೆನೆ ಮುಂಗಾಣದೆ ವಿಷಾದ–ಜಲಧಿಯೊಳ್ ಕೆಡೆದು—

ಕಂದ॥ ಯುದ್ಧಕ್ಕಂಜುವನಲ್ಲೆಂ
ಮದ್ಧಿತನೊಳ್ ಪಕ್ಷಿಯುಗ್ರಜನ್ಮನೊಳಾನೆಂ
ತುದ್ಧತನಂತಿರೆ ಪೊಣರ್ವೆ*ಂ
ಮುಗ್ಧನೆನೇಂ ವಿಧಿಯ ವಿಧಿಯುದೀತೆರನಾಯ್ತೋ ॥ ೧ ॥

ತಕ್ಕುದನೆಳೆಯೊಳ್ ಜನನಿಕ
ರಕ್ಕರಿಯಂ ದೇಶ–ಕಾಲ–ಪಾತ್ರಮನರಿತೀ ॥
ಯಲ್ಕೆನಗೀ ವಿಧಿಯಂ ತಾ
ನಿಕ್ಕದ ಬಿದಿಯೇಕೆ ವಾಣಿಯುಂ ವರಿಂದನೋ ॥ ೨ ॥

ಕೋಪಾಟೋಪಮೊಳಿಂದು ಕೌರವರೊಳೇ ಪೊಕ್ಕೀಸ್ಮೃತ್ತ–ದಿಗ್ದೇಶ–ಭೂ
ಮಿಪಾಲರ್ಕಳೊಳೇ ಕಡಂಗಿ ಪೊಣರ್ವೆ*ಂ ಪಂಚೇಂದ್ರಿಯವ್ರಾತದಂ॥
ತೀಪಾಂಡೂದ್ಭವರೆಮ್ಮನೊಲ್ದು ಪೊರೆವಾ ಶ್ರೀಕೃಷ್ಣನಂ ಛಾವನಂ
ಗೋಪೀನಾಥನನೆಂತು ಕೂಗಿ ಕರೆವೆಂ ಮೋಹೆಂತು
ಪೂಡಾಂಪೆನೋ ॥ ೩ ॥

ಗದ್ಯ॥ ಎಂಬನ್ನೆಗಮಾ ಅವ್ಯವಸ್ಥಾಂತರಂಗವೀಚಿಯುಂ ಚಿಂತಾ ವಾಚಿಯುಮಾದ ಸವ್ಯಸಾಚಿಯ ಶೌರ್ಯಸಂಕಲ್ಪಮುಮನಣ್ಣಂದಿರ ತಮ್ಮಂದಿರ ಕರ್ಣಮುಮಂ ಪೊಕ್ಕು ಮನೋರ್ಣವಮಂ ಬಿರುಗಾಳಿ ಯಂತೆ ಪಳಂಚಿಸೆ ತಡೆಯದೆ ಬಳಿಗೆವಂದು ಧರ್ಮಪುತ್ರನಿಂತೆಂದಂ–

ನೀಂಪಡಿಯಾಡೆ ನಾಡೆ ತಿರೆಯುಂ ಕಳೆದಾತನೆನಾನೆ ಸೋಲ್ತನ
ಪ್ಪೆಂ ಪರಿಯೆಲ್ಲಮಂ ಮೊದಲೆ ಭಾವಿಸಿ ನೋಡದೆಯುಂತೆ ಸೂರುಳಂ ||
ಪೆಂಪಿನೊಳಿಟ್ಟು ಗೆಯ್ದು ಯವಿವೇಕತೆಯುಂ ಬರುವರ್ ದಲಾವದೆಂ
ತಾಂಪೆವು ಶೌರಿಯೊಳ್ ಮೊನೆಯ ಮುಳ್ಳಿದು ಪಿಂದಿನ ಸೋಲಗಾಯ
ದೊಳ್ ||೨೩||

ಕಂ||
ಬರೆವುದು ಬಗೆವುದು ಮಾಜಲ್
ನೆರೆಗುಂ ನುಡಿಮಾಜಲರಿದು ನಮ್ಮನ್ನರ್ಗೆಂ
ದರಿದರಿದುಂ ನೀನಾರ್ತನ ನೆಲೆ
ಯರಿಯದೆ ಪೂಣ್ದಯ್ತಮೋಘ-ಸಂಕಟಮಕ್ಕೇ ||೨೪||

ಎನೆ ಕೇಳರ್ಜುನ-ಬಾಹು-ಶಕ್ತ್ಯನಲನೀ ವಾತೋದ್ಭವ-ಪ್ರೇರಿತಂ
ಮೊನೆಯೊಳ್ ದಿಟ್ಟ್ಕುಲ-ಶುಷ್ಕ-ಪತ್ರ-ತತಿಯುಂ ಪ್ರಧ್ವಂಸನಂ
ಮಾಡುಗುಂ ||
ಮನದೊಳ್ ನಿರ್ಭಯರಪ್ಪ ಬೀರದರವಕ್ಕಳ್ಗುತ್ಸಹಂ ಜುದ್ದಮಾಂ
ಬನಮಂ ಸಾರ್ದೆವದೇಂ ಮುಳುಂಗೆ ಕುಳಿರೇನೇಕಾಂಗರೇನಕ್ಕರೇ ||೨೫||

ಗದ್ಯ|| ಎಂದು ಮಾರುತಕುಮಾರಂ ಬೀರವಾತಂ ಬೀರೆ—

ಕಂದ
ಪಲವೇಂ ಕ್ಷಾತ್ರತೆಯಿಂದೆ ನ
ಕುಲನೆಂದಂ ಗಯನನಂತು ನಾನಾರಯ್ವಂ ||
ಕೊಲಲ್ಕೆತರೆ ಕೃಷ್ಣನೊಳಂ
ಮಲೆದಾಂಪಂ ನಡುಗಿ ನುಡಿಯ ಪಡಲಿಡಲುಂಟೇ ||೨೬||

ಬೇಸಗೆ ಕಾಯ್ದು ಭೂತಳವ ತಾಪಿಸೆಯುಂ ಮಳೆಗಂ ನಿಮಿತ್ತಮಾ
ಬೇಸಗೆಯಪ್ಪವೋಲ್ ಹರಿಯೊಳಾಹವದಿಂದತಿ ಕಷ್ಟಮಾದೊಡಂ ||
ಗಾಸಿಗಳಾಗವಲ್ಲಿ ಬಳಿಯುಂ ಸೊಗಮಪ್ಪುದು ತಪ್ಪದಣ್ಣ ಪಿಂ
ದೋಸಮಿದೆಂದನಂದು ಸಹದೇವಕನುನ್ನತ-ಬುದ್ಧಿ-ಭಾವಕಂ ||೨೭||

ಗದ್ಯ॥ ಅಂತಾ ಮುಂಚಿ ಮಿಂಚುವ ಸಂಘಟ್ಟಣೆಗೆ ಕೊಂಚೆ ಮಾಡೊಡಂ ಪಿಂಚದೆ ಸಂಚಿತ ಮನೋಧೈರ್ಯದಿಂದಾ ಕೊಂತಿ ಮಕ್ಕಳೈಕಮತ್ಯಂ ಬಿಡದಿರೆ—

ನರನೊಸೆದಂ ಸ್ವಕಾರ್ಯಮನೆ ಮಾವಿನವಟ್ಟಂಬ ನುಲಂಗುವಾಗಳಾ
ಗಿರಿಶವನರ್ಚಿಪಾಗಳಿರುಳುಂ ಪಗಲುಂ ಮರವಿಲ್ಲದಾ ನಭ॥
ಸ್ಥರನನೆ ರಕ್ಷಿಪಂ ನೆಲಕಲಂ ಪಣವಂ ಪರಿರಕ್ಷಿಪುದದಿಂ
ಘಂಸಿರೆ ಪೂಣ್ದ ಕಜ್ಜವೊರೆಯುಂ ಸಲೆತೀರ್ದಡೆಯೇಂ ಬರುಂಬನೇ॥೨೮॥

ಗದ್ಯ॥ ಅನ್ನೆಗಂ ಹೇರಿಗನಂತೆವೋಲ್ ನಾರದಂ ಬಂದು ಪೇಳೆ—ಧನಪಸುತಂ ನಿಜವಯಸ್ಯನಪ್ಪ ವಿಜಯನಂ ಸಾದ್ಯದಂ ತಿಳಿದು ಮುರಳೀಧರಂ ತಾನಸಮ-ಬುದ್ಧಿ ಬಲನಾದೊಡಂ ಭ್ರಾತರನಪ್ಪ ಬಲನೊಳಂ—ಉದ್ಧವಾದಿ ಮಂತ್ರಿಗಳೊಳಂ-ಮಿಕ್ಕ ತಕ್ಕ ರಾಯಗಜ್ಜ ಮಜ್ಜಗಮುಂ ಸಜ್ಜುಗೊಳಿಪ ಸಜ್ಜನಿಕೆಯೋಲಗಿಗರೊಳಂ-ಪಿರಿದುಂ ತರ್ಕಿಸಿ ತರಿಸಂದೊಡಸೆಯಕ್ರೂರನಪ್ಪಕ್ರೂರನಂ ಕರ್ತವ್ಯಮನರುಪಿ ಪಾರ್ಥನೆಡೆಗೆ ದೂದಟ್ಟುವುದುಂ—ಅತನದ್ವೈತಪಥದಿಂದಾ ದ್ವೈತ ವನಮುಂ ಪೊಕ್ಕು ಪಾಂಡವನಿವಸಥಮುಂ ಪುಗೆ-ಸಸಹೋದರಂ ಯುಧಿಷ್ಠಿರನಕ್ರೂರನಂ ಕರಮುಪಚರಿಸಿ ಶ್ರೀಕೃಷ್ಣಬಲಭದ್ರಾದಿಗಳ್ಗ ಮನಾಮಯಮುಂ ಬೆಸಗೊಂಡಾ ಬಳಿಕ್ಕೆಕ್ಕಟೆಯೊಳ್ ನರನಿಂತೆಂದಂ-

ವನವಾಸಂ ಘಟಿಪನ್ನಮಾಂ ಕಳುಪಿದೆಂ ತಾಯ್ಗೊಡಿಯಾಟಾಳಿಕಂ
ದನನಂದಂತಭಿಮನ್ಯುವೇಂ ಸುಖಿಯೆ ವಿದ್ಯಾಪ್ರೇಮಿಯೇ ಗೌರವಾ॥
[illegible]ನೆ ಪಚ್ಚೇಷ್ಟಿಯೆ ನೀತಿಯೊಳ್ ಕುಶಲಿಯೇ ನೆಮ್ಮಂ ದಲೇನೆಂದಪಂ
ತನ್ನಗೇಗಂಬುಜನಲ್ಲದೇಂ ಪಿರಿದೊ ಪುತ್ರಸ್ನೇಹಮಿ ಧಾತ್ರಿಯೊಳ್॥೨೯

ಗದ್ಯ॥ ಆ ನುಡಿಗಕ್ರೂರನಭಿಮನ್ಯುವ ನೈಜಗೌರವಮಂ ಬಣ್ಣಿಸ
ಲೆಳಸಿ ತಾನಿಂತೆಂದಂ —

ಕಂದ ಆಟದೊಳವನಿಟ್ಟಾ ಸೆಂ
ಡೇಟಿಂ ಕಾಲ್ಕುಸಿದು ಬೀಳ್ವರೋರಗೆಗುವರರ್ ॥
ಪಾಟದೊಳೋಜರ್ಗರಿಪ
ಲ್ಕಾಟಿಪನಂತಾತನರಿವನಾರ್ಪೆರರರಿವರ್ ॥೩೦॥

ತೊಳಪಂ ಕನ್ನಡಿಯೊಳ್ ಮಾ
ರ್ತೊಳಪಂದದಿನೆವನ ಶೀಲ-ಸುಕಲಾಂಶಂಗಳ್ ॥
ಕೆಳೆಯುರ ಬಳಗದೆ ಬಳ್ವಳ
ಬಳೆಯುತ್ತಿರೆ ಬಳೆಯುತಿರ್ಪನೆಳವೆಯೊಳತುಳಂ ॥೩೧॥

ಅಭಿಮನ್ಯುವಂತೆ ಸುಬಲಂ
ಸುಭಟಂ ವಿನಯಂ ಕುಶಾಗ್ರಮತಿಯತಿತೇಜೋ ॥
ವಿಭವಂ ಜನಹಿತನುಂ ನೀಂ
ಪ್ರಭವಿಸೆನುತೆ ಮಕ್ಕಳಂ ಜನರ್ ಬೋಧಿಸುವರ್ ॥೩೨॥

ಗದ್ಯ॥ ಮತ್ತಮೆಳವರಯದಿಂ ತೊಡಂಗಿ ಕೌರವರ್ ನಿಮಗಿತ್ತ-
ಬನ್ನಂಗಳುಮಂ ನಿಮ್ಮ ವೀರಕಾರ್ಯಾಂತರಂಗಳುಮಂ ನಿಚ್ಚ
ಮೋದುವಳಾಗಿ ಸುಭದ್ರೆಯೊಪ್ಪುತ್ತಿರೆ—

ತಾಯಿಂ ಕೇಳ್ದಿತಿಹಾಸಮಂ ಕುರುಕುಲಕ್ಷ್ಮಾಪಾಲನಂ ಖೂಲನಂ
ನಾಯಂ ತಟ್ಟುವೆನಾಂತನಂ ಪೊಡೆದು ಮಾಳ್ಪೆಂ ಕಾಲನಂ ಲೋಲನಂ ॥
ನ್ಯಾಯಾಧಾರ್ವನಿಯಂ ಸ್ಥಿರಂ ಗುರುಜನಕ್ಕಾಂ ಮಾಡುವೆಂ
ನೋಡುವೆಂ
ತಾಯೆನ್ನಟ್ಟಿಸುತುಂ ಕುಮಾರನ ತೆರಂ ಮಾತಾಡುವಂ ಕಾಡುವಂ ॥೩೩॥

ಗದ್ಯ॥ ಎಂದಕ್ರೂರಂ ಸಹಜಮಾಗಭಿವರ್ಣಿಪುದುಂ --

ಕಂದ॥ ಸುತನಾ ವೀರೋಕ್ತಿಗಳಾ
ಪ್ರತಿವಚನಮೆ ವೀರಪುಳಕ-ವರ್ಧಕಮೆನುತುಂ ॥
ಪತಿಯಂತೆ ಪೊರೆವ ಕೃಷ್ಣನ
ನತಿಮುದದಿಂ ಪೊಗಳ್ದು* ಪೊಗಳ್ದ*ನಾ ಸಿತತುರಗಂ॥೩೪॥

ನೋಯುತ್ತೆ ತರ್ಗಲಾ ಕುರು
ರಾಯರ್ ಹರಿಯೇಳ್ಗೆವಡೆಯೆ ಪಾಂಡವರ್ಗಕ್ಕುಂ
ತೋಯಧಿಯೊಳ್ ಖಳತತಿ-ನಾ
ರಾಯಣರಾ ದೇವಗಿರಿಗೆ ಕಾರಣರಲ್ತೇ ॥೩೫॥

ಕುಳ್ಳಿರಲಲ್ಲಿ ತರ್ಗಿಫಳಮಂ ಕುಡುಗುಂ ತರು ದಿಟ್ಟಿಯಿಟ್ಟೊಡಾ
ಬಳ್ಳಿಯೆ ಬಾಗಿ ಸುತ್ತಿಗೆವೊಲಿರ್ಕುಮದೆಲ್ಲಿಯುಮುಂಟು ನೀರ್ವೊನಲ್ ॥
ಕೊಳ್ಳದೆ ವೈರಮಂ ಮರೆಗುಮುಗ್ರಮೃಗಾವಳಿ ದಕ್ಷಿಣಾನಿಲಂ
ತೆಳ್ಳಿಕುಮಾದ ಸೇದೆಯನಿವೇಂ ಪ್ರಭುವೋಪಿನೊಳಲ್ಲದಕ್ಕುಮೇ ॥೩೬॥

ಆತಂ ಮಾನುಷರೂಪನಾಂತ ವಿಭು ಕೃಷ್ಣಂ ಶೂಲಿಚಿತ್ತಜ್ಞನಿ
ನ್ನಾತಂ ಭೂವಲಯೋನ್ನತಸ್ಥಿತಿರತಂ ಸದ್ಧರ್ಮರಕ್ಷಂ ನಮ ॥
ಜ್ಞಾತಕ್ಕಂ ಕುರುಪಾಗದಂ ಮನದಿನೆಮ್ಮಂ ನಚ್ಚುತಿರ್ಪಂ ಮಹೀ
ನಾಥಂ ಖ್ಯಾತನವಂ ಸ್ವಕಾರ್ಯಪಥದೊಳ್ ರತ್ನಪ್ರದೀಪೋಪಮಂ॥೩೭

ಕಂಪ ಬಅವೇತಕರ್ಾದುದು ಹರಿ
ನಿರವಿಸಿದನೊ ನೀನೇ ಬಂದೆಯೋ ತೆರನೇಂ ಮೇ ॥
ಶೊರೆಯು ನಕಾಯರ್ಾದನ್ಯೇ
ನಿರತೋಜನ ವೆಂಬರಲ್ತೆ ಬಲ್ಲಜನರ್ಕಳ್ ॥೩೮॥

ಗದ್ಯ॥ ಎಂಬುದುಂ --

ಬಗೆದಾತ್ಮನನಭಿವರ್ಣಿಪ
ಪೊಗಪಂ ಸೇರ್ದಂತರಿಂದೆ ಬೆಳ್ವೆಳಗಿನಿತುಂ ॥
ಒಗೆದಪುದೆನೆ ಸುಲಿಪಲ್ ಜಗ
ಜಗಿಪೆ ನರಂಗೊರೆದನಿಂತು ಟಂದಕ್ರೂರಂ ॥೩೯॥

ಪ್ರಿಯಮುಮಂ ಸತ್ಯಮುಮಂ ವಾ
ಕ್ಕೆಯೊಳೊರೆದಾನೊರೆವೆನೀಗಳತಿಶಯ-ಗುಣಮಂ ॥
ಅಯ-ನಯ-ಯುತಮಂ ಮನಕೆ
ಪ್ರಿಯಮಾದೊಡಮಂ ಸುಪಥ್ಯಮೆನಿಕುಮಮೋಘಂ ॥೪೦

ಪಗೆಯುಲ್ ತಗದ ನಿನತು ನೆ
ಲ್ವಗೆಯೊಳ್ಗಳೆ ಹೂಳ್ಗುಮೊಗೆಗುಮಿನ್ನೀ ಬೆಸದಿಂ ॥
ಜಗಳಂ ಮಲಯುಮಹೀಜಂ
ಜಗದೊಳ್ ಕಂಪಳಿಯೆ ಬಾರ್ತೆಯೇನಂತಪ್ಪುಯ್ ॥೪೧॥

ಗದ್ಯ ॥ ಅದೆಂತೆನೆ, ಓಪನಪಗೆಯೋಪ್ರೋಪನೊಳ್ ಪಗೆಯ
ನೊಡರಿಕುಮೆಂಬುದಂ ಮರೆದಿಯದಿರ್-ಗಯನನೋವೆ ಗೋಪತಿಲ
ಕಂಗೆ ನೀಂ ವೈರಿನಿಕ್ಕುವಂ-ಇಂತಾಗದರ್ ತಾಗದಿರ್-ಗಯಿನ
ಕೊಲಲ್ ಪೂಣ್ದ ಹರಿಯ ಸೂಳುಳ್ ಬಂಜೆಯಾಗದು-ಮೊದಲೆ
ಯಿದಸೆಲ್ಲಿ ಮಾರಯ್ದು ಗಯನಂ ಪತ್ತುವಿಡದ ತಪ್ಪು ತಾನೆನ್ನ
ಮಾತಿಂದೆಯುಂ ಬಿಡದೊಡೆಯುಸಕಳಿದು ಮಾರಿ ಮಾಂಟುಗುಮದರಿನ
ದಾಗದಂತೆ ಗೆಯ್ದಾ ಹರಿಗೆ ಪೊಡೆವಟ್ಟು ಸೊಗಂ ಬಾಳ್-ಇಂತಿದು
ಸೊರೆಯಲೆ ದೂದುವಂದೊ ಶ್ರೀಕೃಷ್ಣನ ಬೆಸದಿಂದೆನೆ—

ಕಂದ|| ಪೂಣ್ದೆನ್ನೆವರಂ ಪೆರನೋಲ್
ಕಾಣ್ಬೆಂ ಪೂಣ್ದಾ ಬಳಿಕ್ಕೆ ಹರಣದಿನಧಿಕಂ
ಮಾಣ್ಬೆನೆ ಶರಣಾಗತನಂ
ಜಾಣ್ಬೆಯನುಂ ಗೆಯ್ಯದೆಯ್ದಿ ಪುಗು ದೋರಗೆಯಂ||೪೨||

ಅರಸುಮಕ್ಕಳ್ಗರಮೆಂದು ಬಂದು ಮರೆವೊಕ್ಕಾತಂಗೆ ಧೈರ್ಯಂ ಗುಡಲ್
ನೆರೆದೆಂ ನಲ್ಪಗೆಯಾತನಂ ಪಗೆಯಲಲ್ಲಂ ದೈವಪೊತ್ತೈಸಲಾ ||
ಹರಿಯಂ ಕಾದುದೆನಿಂದ್ರಮುಖ್ಯರೊಳಮಾಂ ಮಾರಾಂಪೆನಾ ಪಾರ್ವತೀ
ಶ್ವರನಂ ತಳ್ತಿರಿವೆಂ ದಲೆನ್ನ ಶಪಥಂ ಬೀಯಲ್ ಸೊಗಂ ಬಾಳ್ವೆನೇ ||೪೩||

ಗದ್ಯ|| ಎಂಬರ್ಜುನನ ಮಾರ್ನುಡಿಯಿಂ ತನ್ನ ದೂದುಗಜ್ಜಂ ಪಸು ಕರ್ಚಿ ಸೆಳೆದ ಬಾಳೆಗಿಡುವಂತಾಗೆ ಮತ್ತಮುಂ ಬೇರೂರಿಸಲ್ ಬಗೆದು ತಾನಿಂತೆಂದಂ—

ಚಕ್ರಿಯ ಶಕ್ತಿಯುಂ ವಿದಿತ ಶಾಂರ್ಗಧನುರ್ಧರನೇಳ್ಗೆವೊಂದಿದಾ
ವಿಕ್ರಮುಮುಂ ಗದಾನ್ವಿತನ ಮೋದಿಕೆಯುಂ ನಿನಗೇತಕಾತನಾ||
ಶಕ್ರನುಮಂ ಬೆದರ್ಕೆಗೊಳಿಪಗ್ಗದ ಬಂಟರ ಕೂರ್ಸರಲ್ಗಳುಂ
ವಕ್ರತಮಾಗದೇಗೊರ್ಳಿಸೆ ಬಗ್ಗದ ಕೂರದ ಚೆನ್ನ ಪೊಂಗರಾರ್ ||೪೪||

ಕಂದ|| ಬಿಡದೊಡೆ ಗಯನಂ ಕಾಡೊಳ್
ಪೊಡವಿಯನೊಳವೊಕ್ಕೊಡಂ ಬಿಡಂ ಜಗದೊಡೆಯಂ||
ಕಡುವಡೆಯೊಡನೆಯೆ ನಡೆತಂ
ದಡಿಗಿಡಿಕುಂ ನಿನ್ನ ಮರವ ಬಿರುಗಾಳಿಯವೋಲ್ ||೪೫||

ದೇವದ್ವೇಷಿಗಳಂ ವಸು
ದೇವಸುತಂ ಕೊಂದು ಕೂಳ ಕಂಸನುಮಂ ತಾ||
ನೋವದೆ ಮಾವನನಳಿದಂ
ಭಾವನನೇಂ ನಿನ್ನನುಳಿವನೆಂದೇಂ ಬಗೆವಯ್ ||೪೬||

ಗದ್ಯ॥ ಎಂದಕ್ರೂರನುಸುರೆ ಬೀರಮಾಮಸಕಂ ಮಿಗೆ ಚುರ್ಚಂಗೊಳ್ಳಿಯಂ ನುರಿದು ಕೆದರ್ದ*ಂತಾಗೆ ಸೈರಿಸಿದೊಡಂ ಸೈರಿಸ ಲಾರದೆ—

ಕಂದ॥ ಮೂಣ್ ಮೂಣ್ ಸಲ್ಲದುದಲ್ಲದು
ದಣ್ಮನ ಬಣ್ಣನೆಯ ಮಾತು ಕಬ್ಬಮನೊರೆವಾ॥
ಜಾಣ್ಮೆಯದಂತಿರ್ಕೆವಾ ನಿ
ನ್ನಾಣ್ಮನನಾಗಸದೊಳಿಡುವ ನಿನ್ನಸ್ನರೆದಾರ್ ॥೪೭॥

ಹರಿ ನೀರನಡುವಿನಂಬರ
ಚರ-ಕೀಟಕೆ ತೀರದರ್ಜುನ-ದ್ರುಮ-ಶಾಖಾ॥
ಕರವುಂ ದಿಂಕಿಡೆ ನೆರೆಗೂಮೆ
ಹರಿಗಳ್ಕರೆನೆಂದುಮೆನ್ನ ಪೂಣ್ಕೆಯನುಳಿಯೆಂ ॥೪೮॥

ಸೊರ್ಕಿಂ ಸುರರಂ ಪೀಡಿಪ
ರಕ್ಕಸರಳಿಯಲ್ ಜನರ್ಕಳಿಗರಲ್ಕುರ್ಕೆಂ॥
ಮಿಕ್ಕೆನ್ನೊಳ್ ಮಲೆದಾಂತೊಡೆ
ಸಕ್ಕರೆ ಬೆಮೆಯಿಂದೆ ಮಣಲನುಂಬಂತಕ್ಕುಂ ॥೪೯॥

ಗದ್ಯ॥ ಎಂದು ಧನಂಜಯನಂಜದೆ ನುಡಿಯೆ ಸಂಧಿಯ ಕೀಲ್ಮು ರಿದುದೆಂದಕ್ರೂರಂ ಮರಳ್ದಾ ನಂದಸೂನುಗಿದಂ ಕೇಳಿಸೆ— " ಅಯ್ದುಂ ಪಗಲ್ಗಳ್ ಪೂಣ್ದು ಮುಡಿದುವು-ನಾಳೆಯೆ ಪೊರಮ ಡುಗೆ ಮೊನೆಗೆ ಬಲ್ಲಣೆ ಪುರದಿಂ" ದೆಂದು ಸೇನಾಪತಿಯಪ್ಪ ಸಾತ್ಯಕಿಯಂ ಬೆಸಸಲೊಡಂ-ರಾಜಾಜ್ಞೆಯಿಂ ಮೊನೆಗಾಳೆಗಳ್ ಸೂೞರಿತು ಮೊಳಗುವುದುಂ- ಸೇನಾಭಟರಂ ನೆರೆಯಿಪ ಸೂಳಾ ಯ್ತರ ಜಂಗುಳಿಯಾ ಪುರದೊಳೆತ್ತಂ ಸುತ್ತುತ್ತಿರೆಯಿರೆ —

ಕಂದ॥ ನಡು ಬಾನೋಲಗ ಮಣೆಯಿಂ
ಪಡುವಾ ಮನೆಗೆಂದು ಪಗಲರಸನಿಳಿಯುತ್ತುಂ ॥
ಬಿಡದೆ ತಣಿಯುತ್ತು ಮಿರ್ದಂ
ತೊಡಂಗಿದುದು ಬಿಸಿಲಡಂಗಲೆಲರುಂ ತೀಡಲ್ ॥೧೪೦॥

ಇನನ ಬರವರಿತು ಕುಂಕುಮ
ಘನರಸಮಂ ಸೂಸಿ ಪವಳದೋರಣದಿಂ ಮುಂ
ಮನೆಯುಂ ಕಯ್ಗೆಯ್ದಳ್ ಪಡು
ವಿನಿಯೆ ಯೆನಿಸಿ ಸಂಜೆಗೆಂಪು ರಂಜಿಸಿ ತಾಗಳ್ ॥೧೪೧॥

ಸಿರಿಯು ನೆಲೆಮನೆಯು ಸಿರಿಯುಂ
ಕರಗತ ಮೆಂಸಗಲ್ಕೆ ಬರೆ ಮಧುವ್ರತ ಚೋರಂ ॥
ಸಿರಿಯಾಳ್ಗಳ್ ತಿಳಿದನತಿ
ಭರದಿಂ ಪಿಡಿಯಿಕ್ಕಿದಂತೆ ಮುಗಿದುದು ತಮಂಳಂ ॥೧೪೨॥

ಗಾಳಿಗೆ ಮೈಯೊಡ್ಡುತೆ ಪಗ
ಲೂಳಿಗ ವೇಸರನೆ ಕಳೆವ ಪೊಳಲಜ ನರ್ಕ್ಕಳ್ ॥
ಮೇಳಯಿಸಿ ಸೊರ್ಕುವ ಕುಮಾ
ರಾಳಯುಮಂ ಪುಗೆ ಮನೋಜ್ಞ ಸಂಧ್ಯಾಸಮಯಂ ॥೧೪೩॥

ಅಂಬರ ಚರರ್ಗ*ಳ ಸೊಡರ್ಗ*ಳಿ
ಮೆಂಬಂತಂಬರದರಿಲ್ಗಳುಂ ಮನೆ ಮನೆಯೊಳ್ ॥
ತುಂಬಿದುವು ದೀಪಿಕಾ-ನಿಕು
ರುಂಬಂಗಳ್ ಬಾಸಣಿಸಿತು ಕತ್ತಲೆಯೆಳೆಯುಂ ॥೧೪೪॥

ಇದು ಮಳೆ ಮಿಂಚು ಗುಡುಗು ಮಿ
ಲ್ಲದ ಸೋಂಕದ ಕಾರ ಮುಗಿಲ ಮುಸುಕಿದು ಕಣ್ ಚು ॥
ರ್ಚದ ಕಿರ್ಚಿಲ್ಲದುಸಿರ್ಗ
ಟ್ಟದ ಪೊಗೆಯೊದವೆನಿಸಿ ಮುರ್ಬಿ ಸರ್ಬಿತ್ತಾಗಳ್ ॥೧೪೫॥

ಶುದ್ಧಾಂಬುಸ್ನಾನಮಂ ಗೆಯ್ದೊಸೆದು ತಳೆದು ಭೂತಿತ್ರಿರೇಖಾದಿಯಂ ಸಂ
ಶುದ್ಧ್ಯುತ್ಸ್ವಂತರಂಗಸ್ಥಿತಿಯನಮಳ ಸಂಧ್ಯಾಜಪಂ ಮಾಳ್ಪ ರಾಗೋ||
ದ್ಬುದ್ಧ ಸ್ತೋತ್ರಂಗಳಂ ಪಾಡಿಸುವ ಶಿವನನರ್ಚಿಪ್ಪ ಸತ್ಕಾರ್ಯಮಂ ಸ
ದ್ಬುದ್ಧಿ ಶ್ರೀಯುಕ್ತರಾಗೋದುವ ಸುಜನರಿನೊಪ್ಪಿದರ್ದಾಗಳ್
ನಿಶಾಸ್ಯಂ ||೫೬||

ಗದ್ಯ|| ಅನ್ನೆಗಮಿತ್ತ ಹಸ್ತಿನಾವತಿಯೊಳ್—

ಸುರಗಂಗಾಸುತ-ಕುಂಭಜಾತ-ಕೃಪರಿಂ ದುಶ್ಶಾಸನಾದಿ-ಸ್ವಸೋ
ದರರಿಂ ಸೌಬಲ-ಸೈಂಧವ-ಪ್ರಮುಖ ಬಂಧುವ್ರಾತದಿಂ ಪುತ್ರರು||
ತ್ಕರದಿಂ ಮಿತ್ರಜ-ಮುಖ್ಯ-ಮಿತ್ರಚಯದಿಂ ಶ್ರೀಮಂತ-ಸಾಮಂತರಿಂ
ಕುರುರಾಜಂ ಮೆರೆದಂ ನಿಶೀಥ-ಸಭೆಯಂ ರಾರಾಜದಿಂದ್ರಶ್ರಿಯಂ ||೫೭||

ಕಂದ|| ಪಳುವಂ ಪೊಕ್ಕರರಿಗಳಸ
ಕಳಿದಾ ಪಗೆಯಿಂದಖಂಡ ಧರಣೀಶನೆ ನಾಂ||
ಬಳಿಕೇಂ ನ್ಯೂನತೆಯೆಂದಡ
ವಳಲಿಲ್ಲದೆ ಸೊರ್ಕಿ ಮೆರೆವಿನಂ ನಿಜಸಭೆಯೊಳ್ ||೫೮||

ಪೊಗರಿಂದೊರ್ವೋದಲೊಳ್ ಬೆರ
ಗುಗೆ ಮಹತೀನಾದ-ಮಿಳಿತ-ಭಗವನ್ನಾಮಾ
ಳಿಗಳನುಪಮ ಗಾನಂ ಕಿವಿ
ವುಗೆ ನಿಜಮಂ ಬಗೆಯೆ ದೇವಮುನಿ ಸಭೆಗಿಳಿದಂ ||೫೯||

ಕಮನೀಯ ದೇಹಮಂಬರದೊಳ್
ಸುಮುಖಂ ಮುತ್ತಲ್ಲಿ ಸರಸಗಾನಮುದರೊಳ್ ||
ರ್ಘಮಹತ್ವಮಲ್ಲಿ ಕಡುಬಳ
ತಿ ಮುನಿಂಬುಗೆ ನೋಡಿ ಸಭೆಯೆ ಮರವಡುತಿರ್ಕುಂ ||೬೦||

ಯೋಗಸಮಾಧಿಯೊಳ್ ನಿರತರಾದರೊ ಚಿಚ್ಛವಿಯಂ ವಿಲೋಕಿಪು
ದ್ಯೋಗದೊಳಿರ್ದರೋ ಪರಮಭಾವನೆಯಲ್ಲಿಯೆ ಮಗ್ನರೋ ಸುಚಿ॥
ತ್ರಾಗತವಿಸ್ಮಯಾನ್ವಿತ-ಸಭಾಂತರವೋ ಎನೆ ಶಂಕೆ ನಿಲ್ವಿನಂ
ಯೋಗಿ ಮಹಾತ್ಮ-ದರ್ಶನಸುಖಾಲಭರಾ ಸಭಿಕರ್ ಮುದಾಧಿಕರ್॥೬೧॥

ಎಂಬಲ್ಲಿಗೆ ಸತ್ವಾಲೋಕನ ಕಾವ್ಯದೊಳ್

ಅ ಭ ಯ ಪ್ರ ದಾ ನ – ನಾ ರ ದಾ ಗ ಮ ನ ಂ

ಚತುರ್ಥಾಶ್ವಾಸಂ



# ನಾರದ ತಂತ್ರಂ - ಸಮರ ಸನ್ನಾಹಂ

## ಪಂಚಮಾಶ್ವಾಸಂ

ಕಂದ|| ಶ್ರೀ ಶಿವ-ವಿಷ್ಣು ಹಿತೋದಯ
ಕೌಶಲವಂತಂ ಗುಣಾಗುಣಜ್ಞಂ ಸಂತಂ||
ಭಾಷಾತನೂಜನನುಱವು
ಭಾಸಂ ಸ್ಮಿತವದನನಾಗಿ ನಾರದನೆಸೆದಂ|| ||೧||

ಕಂಜಾರಿಶಿರನ ನುತಿಗಾ
ನಂ ಜಾಣರ ಜಯಿಕುಮೆನಿಸೆ ತನ್ಮುನಿವರನಾ
ಕೆಂಜಡೆಯಾದಲೆಯೊಳೆದೊಡೆ
ರಂಜಿಪ ಸುರ-ಕುಸುಮ-ಧಾಮಮೇನಿಟ್ಟಳವೋ ||೨||

ತೊಳಚಿಯ ರುದ್ರಾಕ್ಷಿಗಳಾ
ವಳಿಗಳ್ ಗಳದಲ್ಲಿ ತಾಂಟಿ ಗಂಟಿಕ್ಕಿ ಜನಾ||
ವಳಿಗೆ ಕಿಸುರನಳ್ಕರ್ತಱಂ
ವಿಳಸಿತ-ಮತಿಯೆಂದು ಮುನಿಯನೆಂಬವೊಲೆಸೆಗುಂ ||೩||

ಮಾಲೆಯ ಬೆಳ್ಪು ಧೌತನಿಜವಸ್ತ್ರದ ಬೆಳ್ಪು ವಿಬೂದಿವೆಳ್ಪುಗಳ್
ಮೇಲಿರೆ ಹೃತ್ತಿನೊಳ್ ತಱದ ಭಕ್ತಿಯ ವೈಮೆಯ ಚಿನ್ಮರೀಚಿ ಸಂ||
ಚಾಲನಮಾಗಿ ಬೀಗಿ ಪೊರಸೂಸುತೆ ತೋರ್ದುಱದನೇನನೆಂದಪೆಂ
ಪೋಲಿಕೆಗಾಯ್ತು ಕುಪ್ಪಿಗೆಯ ದೀವಿಗೆ ಬೀರುವ ಭೂರಿರಶ್ಮಿವೋಲ್ ||೪||

ರಯ್ಯಮೆನಿಸಿತ್ತು ಪಾವುಗೆ
ಯೊಯ್ಯನೆ ಮುನಿಮೆಟ್ಟಿ ಚರಣದರುಣತೆಯಿಂ ಪೊ||
ಮ್ಮೈಯ್ಯಾಂತೆನೆ ಗಾಂಪನನಾ
ರಯ್ಯೆ ಮಹಾತ್ಮಪ್ರಸೇವೆ ಘನತೆಗೊಳಿಸದೇ ||೫||

ಕಾಯುದೆ ನೋಯದೆ ಮುದಮಂ
ಬೀಯದೆ ಬೇಸರದೆ ಲೋಕಸಂಗ್ರಹಕಾರ್ಯ॥
ಕ್ಕಾಯತಿಯಂ ಪಡೆದಂ ರಿಸಿ
ರಾಯಂ ಶಿವಭಕ್ತಿಜನ್ಯ-ಶಕ್ತಿಯವಿಷಯಮಂ ॥೬॥

ಜಯಮೆಂದೆಳ್ದು ಸಭಾಜನ
ಚಯಮೆಲ್ಲಂ ಪೊಳ್ಲೇಕಪೇಕೆಯೊಳಾಗಳ್॥
ಜಯಘೋಷ ಘನಸ್ವನದೊಳ್
ಸಯನಕೆ ಮಿಂಚಿನಿಸಿ ನಾರದಂ ಕಳಸಿಸೆದಂ ॥೭॥

ಇದು ಕಜ್ಜಂ ತನಗೆಂದು ದಂಡನತಿಯಿಂ ಕುಂಬಿಟ್ಟು ಸದ್ಭಕ್ತಿಯಿಂ
ಮುದದಿಂ ಧನ್ಯತೆಗುರ್ಕಿಯುನ್ನತತರ ಸ್ಥಾನಸ್ಥನಂ ಮಾಡಿ ಸಂ॥
ಪದದಿಂ ಯುಕ್ತತರೋಪಚಾರವನೊಡಂ ಬಟ್ಟಂ ಕುರುಕ್ಷೋಹಿಣೀ
ಭೃದನೀಕ್ಷೋಣಿಗೆ ಸಂಯಮಾರ್ಘರೆನಿಪರ್ ಸಂಪೂಜ್ಯರೇನಾಗರೇ ॥೮॥

ಗದ್ಯ॥ ಮತ್ತಮಿಾ ನುಡಿವೆಣ್ಣಣುಗಂ ಬಂದುದು-ತನ್ನತ್ರಣಿಂ ಸೋಲ್ತು ಕೊಂತಿಯಣುಗರಂ ಮನ್ನಿಸಿ ನೆಲನಂ ಪಚ್ಚುಗುಡೆಂದು ನುಡಿವೊಡಾಗವೇಳ್ಕುಮದಾಗದೆಂದು ದುರ್ಯೋಧನನುಂ — ನಿಜ ದರ್ಶನದಿಂ ಮೇಣ್ ಮಧುರವಚನದಾನಾದಿಯಿಂದಾ ಸ್ಥಾನದೊಳ್ ಸೈಪಿನ ಮೊಳೆಯಂ ಮೊಳೆಯಿಸಲಕ್ಕುಮದೊಳ್ಳಿತೆಂದು ಕಲಶಜ-ನದೀನಂದನಾದಿ ಗುರುಜನರುಂ-ದುಷ್ಟಶಮನ-ಶಿಷ್ಟಪರಿಪಾಲನಾದಿಯಿಂ ಸೃಷ್ಟಿಯೊಳುತ್ಕೃಷ್ಟಧರ್ಮಮಂ ನೆಲೆಗೊಳಿಪ ಭಗವಂತೆಂಗನುಕೂಲನಾಗಿಯದೇನಾನುಂ ಪೊಸಕಿಸುರಂ ಪುಟ್ಟಿಸಲಕ್ಕುಮದು ಮೇಲೆಂದು ವಿದುರಾದಿ ಸಜ್ಜನರುಂ-ಪ್ರಮುಖಕಾರ್ಯಪ್ರಪಂಚಮಿರಲಿ ವೇಳ್ಕುಮದುವುಂ ಮುಂದೆ ತಿಳಿಯಲ್ ಬರ್ಕುಂ ನೋಳ್ಪಸೆಂದುಳಿ

ದೆಲ್ಲರುಂ ತಂತಮ್ಮ ಬಗೆಯ ಗೊತ್ತುಗುರಿಯುಂ ಪತ್ತುವಿಡಿದಿರೆ –
ತನ್ನ ಕಾರ್ಯಂ ಸ್ಮಿತಶಾಂತ್ಯಮೆಂದರಿಪುವಂತೆ ಮುನಿ ಕಿರುನಗೆ
ಬೀರ್ವುದುಂ —

ಕಂದ॥ ಪೊತ್ತಗೆಯೊಳ್ ಚೆಲ್ವರೆಪದ
ಮುತ್ತಿನ ಸಾಲಕ್ಕರಂಗಳಂದದೆ ಮೊಗದೊಳ್ ॥
ಕಿತ್ತಡಿ ನಗೆ ಸುಳಿಪಲ್ಗಳ
ಚಿತ್ತರವೇಂ ಬೆಳಗಿ ದಸೆಗೆ ಕಂಗೊಳಿಸಿದುದೋ ॥ ॥೯॥

ವದನ ದರಸ್ಮಿತ ಚಂದ್ರಿಕೆ
ಮುದಮುಂ ಸಾಹಸಮನುತ್ಸಹ ಮನುದಿಸುವಿನಂ ॥
ಪದನರಿತು ಕುರುಕುಲಾಗ್ರಣಿ
ವದನೇಂದೀವರವೊರಲ್ದು ಮಲರ್ದ*ತ್ತಾಗಳ್ ॥೧೦॥

ನಿಮ್ಮನ್ನರ್ ದಯೆಗೆಯ್ವ ಕಾರಣದಿನಿಂ ದೈಶ್ವರ್ಯಮುಂ ಶೌರ್ಯಮುಂ
ನೆಮ್ಮಿರ್ಕುಂ ದಿಟ್ಟಮೆನ್ನೊಳಾಂ ರಿಪುಗಳಪ್ಪಾ ಪಾಂಡುಜಾತರ್ಕಳಂ ॥
ಸೊಮ್ಮಂ ತಗ್ಗಿಸಿದೆಂ ತ್ರಿಲೋಕಚರರೇ ನೀಂ ಬಲ್ಲಿರೇನೇವರಂ
ಬೆಮ್ಮಿತ್ತಲ್ ಗುರುಗುಮ್ಮಗೆಯ್ದುದರೆ ಮಾಡಲ್ವೇಳ್ಕುಮೊಳ್ಪಾಣೆಯುಂ ॥೧೧॥

ಗದ್ಯ॥ ಎಂದೊಡಾ ಕುರುರಾಜನ ಕೈವದರಿಂದಾ ಅಯ್ವರಂ ಕಿಡಿ
ಸಲೆಳಸಿದಪರಾಧದ ಬಿಳ್ತಿನ ಮೊಳೆಯುರಲ್ವಂತೆ ಮೊಗಮುಲರೆ ಸುರ
ಮುನಿ ತನ್ನ ಬಂದ ಬಗೆಯಂ ನೆನೆದು ಮತ್ತಮಿಂತೆಂದಂ

ಕೂಡಿಯೆ ನೀಂಗಳೆಲ್ಲರಿರೆ ಪೆರ್ಗಸುರಂ ತಳೆದಂದು ಕಾಡಿ ಪೆ|
ರ್ಗಾಡನೆ ಪೊಕ್ಕರಾ ಕಲಹಶೀಲರ ಬಾರಿಯನೇನನೆಂದಪೆಂ ॥
ನೀಡಿರದೀಗಲ್ಲಿ ಮುನಿಸಿಂ ಕೊಲವೂಣ್ದಿರೆ ಕೃಷ್ಣ ಸೋಪುನಂ
ಬೇಡೆ ಗಯಾಖ್ಯನಂ ಪದೆದು ಕೂಡೆನರಂ ಪಗೆಯಾಯ್ತುವರ್ಗಳೊಳ್ ॥೧೨॥

ನಾಡಿದು ಪ್ರೊಳ್ತು ಕಂತೆ ಹರಿಭಾಷೆಗಮರ್ಜುನನೋವ ಸೂರುಳಂ
ಮಾಡಿದುದರ್ಕವಾಗು ನೆಗಳ್ಗ*ಂ ನುಡಿ ಬೀತೊಡೆ ಮೆಯ್ಯನಗ್ನಿಗೀ
ಡಾಡುಗುಮುತ್ತಲಾನಲೆನುತುಂ ಹರಿಯೆತ್ತುಗುಮಿತ್ತಲಿಂದು ಕಾ
ಡಾಡಿಗಳುಂ ಸಖೇಚರ-ವಿಮಾನದಳಾನ್ವಿತ ರೊಡ್ಡುತಿರ್ದಪರ್ ॥೧ ॥

ಗದ್ಯ॥ ಆದುದರಿಂ

ಬಲಹೀನರ್ ಪಾಂಡುಜಾತರ್ಕಳವರ ಹರಿಕಿಳ್ತಿಕ್ಕೆ ನೀಂ ಕೊಲ್ವ ಕಾರ್ಯಂ
ಸುಲಭಂ ತಾನಾದೊಡಂ ಕೀರ್ತ್ಬಗೆಯದೆನಿಸುಗುಂ ಬುದ್ಧಿಶಕ್ತ್ಯಾದಿ ಸಂಪತ್
ಫಲಪೂರ್ಣಂ ನೀನೆನಿಪ್ಪೈ ತರದಿನಳಿಯೆ ನೀನಾರ್ಪೆಯೆಂಬಂತು ಕೋಲಾ
ಹಲನೈ ಪಂಚಾನನಂ ತನ್ನುಣಿಸಿನ ಮಿಗಮುಂ ಪತ್ತುವಿಟ್ಟೆಂತು
ಬಾಳ್ಗಂ ॥ ೪॥

ಗದ್ಯ॥ ಅದಲ್ಲದೆಯುಂ

ನಿನ್ನಂ ಮೋಸದೆ ಚಿತ್ರಸೇನಖಚರಂ ಕೊಂಡೊಯ್ಯಲೇಂ ತಾರನೇ
ನಿನ್ನಂ ವೈರವ ಮಾಣ್ದು ತತ್ಫಲುಗುಣಂ ನೀನಂತುಟಾ ಅಯ್ವರ॥
ಕೆನ್ನಂ ಯಾದವಯುದ್ಧ ಕೊಂದು ಗುಣಿ ನೀನಾಗಯ್ಯ ಶೇದಿಟ್ಟ ಬಾ
ವನ್ನಂ ನೀರ್ಬಿಡುಗುಂ ಬೆರಲ್ ಕದಡುವಂದೊಂದಾಗದೇನಿರ್ಕುಮೇ ॥೧೩

ಕಂದ॥ ಬಂಧುಗಳನ್ಯೋನ್ಯಂ ವೈ
ರಂದಳೆದೊಡಮನ್ಯರೆತ್ತೆ ತೊಟ್ಟನೆ ಪೊಣರ ॥
ಲ್ಕೊಂದಪ್ಪುದಾಗದಿರ್ದೊಡೆ
ಕೊಂದಪ್ಪಂ ವೈರಿಯಾದಮೆತ್ತುತೆ ಬಳಿಯಂ ॥೧೬॥

ಮಾತೇಂ ಕೃಷ್ಣನ ಪುಣ್ದುದಾಗೆ ವಿಜಯಂ ಸೋಲ್ತಲ್ಲಿ ಚಂದ್ರಾನ್ವಯ
ಖ್ಯಾತಿದ್ಯೋತಿಯೆ ಮಳ್ಗಿವೋಕುಮೊಸೆ ಮೇಣ್ ಮಾಣ್ ಮುಂದು ನೀಂ
ಪಾಂಡು ಸಂ॥
ಜಾತರ್ಗೀಗ ಸಹಾಯಿಯಾಗು ಹರಿಯೊಳ್ ಕಾದಲ್ಕೆ ಸೇನಾನ್ವಿತಂ
ದ್ವೈತಾರಣ್ಯಸಮೀಪಕೆತ್ತು ರಣರಂಗಕ್ಕಿಂತು ಲೇಸೆನ್ನರಾರ್ ॥೧೬॥

ಗದ್ಯ॥ ಎಂದಾ ನಾರದನ ಗಾಢಮುಂ ಗೂಢಮುಮಾದ ಮಂತಣಂ ಕುರುರಾಜನ ಮನೋರಥಕ್ಕೆ ತೇಜಿಯುಂ ಬಿಗಿದಂತಾಗೆಯುಂ ತನ್ಮನೆ ಬಣ್ಣಿಪ ಕಾನೀನಾದಿ ವೀರನಾಯಕರ ಬೀರಕ್ಕೆ ಪುಚ್ಚವಣಮಂ ನಿಕ್ಕುವಿಸಿದಂತಾಗೆಯುಂ ಪಾಂಡವರಂ ಬೆರೆವುದೆಂಬ ಗಿರೆಯಿಂ ಕುರುಪಿತಾಮಹ ದ್ರೋಣಾದಿಗಳ ಮನೋನಿಶ್ಚಿತಾರ್ಥಕೆ ತಕ್ಕ ಸಾಮರ್ಥ್ಯಮನಳವಡಿಸಿದಂತಾಗೆಯುಂ - ಸಭಾಜನರೆಲ್ಲರ್ಗಿದು ಸರ್ವಹಿತಮೆಂದು ತೋರಿಬಂದು ಮುನಿಯಿತಂ ಕಲಹಪ್ರಿಯನಲ್ತು ಸ್ನೇಹಪ್ರಿಯನೆಂದು ಪೊಗಳ್ವಂತಾಗೆಯುಮಾರುಮೆರಳ್ನುಡಿಯದೆ ತಲೆಯುಂ ತೂಗೆ- ಕೌರವಂ ಯಾದವರೊಳಾದಮಾದ ವಿರೋಧದಿಂ ದಿನಿಸಂ ಕಿನಿಸಂ ತಾಳ್ದು

ಕಂದ॥ ಜಾಂಬವತೀಪುತ್ರಂ ಮುಂ
ಸಾಂಬಂ ಕೀಳ್ಗೆಯ್ಮೆಗೆಯ್ಯೆ ಬಂಧಿಸೆ ಬರೆ ಮು
ತ್ತಂ ಬಲ ರಾಮಾದಿಗಳಂ
ನಾಂ ಬಲಿಗುಡದಿರ್ದ ಕುಂದಸಿಂದಾಂ ಕಳೆವಂ ॥೧೮॥

ಗದ್ಯ॥ ಎನೆ ತನ್ನ ಕಜ್ಜಂ ಕಯ್ಗೂಡುಗುಮೆಂಬ ಸಂತಸದಿಂ ಶಿವನಂ ನೆನೆಯುತ್ತುಮಾ ಸಭೆಯ ಪೊಡವಡಿಕೆಗಳಂ ಕೈಗೊಂಡಾ ಸಗ್ಗದ ಜೋಗಿಯಾಗಸಮಂ ನೆಗೆದು ಸಾಗಿ-ಪೋಗಲೊಡಂ-ಅಂಕದಳವಡಿಕೆವರಿಗಳ ಬಿರುಸರಮುಮೊಡ್ಡೆರೆಯುರಾಣತಿಯುಮೊಡನೊಡನೆ ದೆಸೆದೆಸೆಗೆ ಪರಿಯೆ-ಸೇನಾಗಣನೆಗೆ ಸೇರ್ದ ಬೀರರ್ ತಂತಮ್ಮ ಮಕ್ಕಳುಮಂ ನಲ್ಲೆಯರುಮಂ ಮೂರುಂ ದೇವಸಕ್ಕಾಶ್ವಾಸಿಸುತ್ತಿರ್ದರ್-ಅವರೊಳೊರ್ವಂ ದೂರಿಸುವ ತನ್ನ ನೀರೆಯೊಡನಿಂತೆಂದಂ

ಇನ್ನೆಗಮಿರ್ದೆವಾಮುದಕ ದುಗ್ಧವಿಮಿಶ್ರಣದಂದದಿಂದೆಯಿಂ
ದೆನ್ನನೆ ರಾಜಹಂಸನರಿದಾಯ್ತು ಮನೋಹರಿ ಒಯ್ದು ಬಂಡಣ
ಕ್ಕೆನ್ನ ವಿನಿಯೋಗಮುಂ ನಿನಗೆ ಮೂದೆವಸಕ್ಕೆಯೆ ಗೆಯ್ವನಂತು ನೀ
ನನ್ನೆವರಂ ಮಾನಕ್ಕೆ ಮರುಕಂಗೊಳದಿರ್ ಬರುವೆಂ ಮನಸ್ಸಖೀ ||೧೯||

ಗದ್ಯ॥ ಎಂದೊಡನಾ ಕಾದಲೆ ನುಡಿಗುಂ—

ಪಾಲನೆ ಬೇರೆಮಾಡೆ ಜಲಮೇಕದನಾರ್ಗುಡಿವರ್ ದಿನಂಗಳಿಂ
ಮೇಲೆಯೆ ನಾತವುಟ್ಟೆ ಪುಳುಪುಟ್ಟಲದಂತುಟಿ ಕೆಟ್ಟುಪೋಂತುಮಾ ॥
ನಾಲಯುದೊಳ್ ಯುಗತ್ರಯ ಸುದೀರ್ಘ-ದಿನತ್ರಯಮಿರ್ದು
ನೋಡುತಾ
ಪೋಲೆಯದೆಲ್ಲಿಯಿಲ್ಲಿಯೆಯೊ ಆಲ್ಲಿಯೊ ಮೇಣೊಡಗೂಡಲಿರ್ಪೆಂ॥೨೦॥

ಕಂದ॥ ಮೂದೆವಸದಿನೆಂದೊಡಮುಂ
ಪಾದದೆ ಪೊರಳುತ್ತೆ ತಡೆಯೆ ಸತಿಸುತರೊರ್ವಂ॥
ಮೂದೆವಸದ ಕಾತುರಾಜ ವಿ
ನೋದ ಸಭಾಲೋಕನಕ್ಕೆ ಪೋದಪೆನೆಂದಂ॥ ||೨೧||

ಗದ್ಯ॥ ಮತ್ತಮೊರ್ವಂ ಮೊನೆಗಳ್ಕರ್ತಂ ತನ್ನ ಬಾರಿಯಂ
ಬಾರಿಸಲಾರಿದೆ —

ಕಂದ॥ ಬಿಸುಸುಯ್ಯುತೆ ಕೆಮ್ಮುತೆ ಪೊಡೆ
ಯುಸಿದಾಗಿಸಿ ಕಂದಿ ನರಳ್ದು* ಕೌಳುಡೆಯೊಳ್ ಮೆ ॥
ಯ್ಯುಗಿಸಿದಸ್ವಸ್ಥನ ವೋಲ್ ಕಾ
ಣಿಸಿದಂ ಪೆಂಕುಳಿ ಬರ್ದು*ಂಕುವಾಸೆಯನುಳಿಯಂ ||೨೨||

ಗದ್ಯ॥ ಅಂತಾ ಮರುದಿವಸದ ಮೊನೆವಯಣಕ್ಕೆ ತಪ್ಪಿಸಿದ ನಂತು ಕುರುರಾಜನ ಕೃತಕರ್ಮಫಲಮೆಂಬಿನಂ ಕೆಲರೊಳಪೂರ್ಣೋತ್ಸಾಹಮುಂ ಕೆಲಂಬರೊಳನಿಷ್ಟ ಸೂಚನೆಯುಂ ಪುಟ್ಟುತ್ತಿರೆ-ಮರುವಗಲೆ ಪಡೆವಯಣಕ್ಕೆ ಪೊಳ್ತಾಗಿರ್ದುದರಿಂ ಪಡೆವಳಗಿರುಳ ನಿದ್ದೆ ಬೀನಂತಿರುಳ ತಿರುಳುಂ ಬೀಯೆ ಬೆಳಕಾಗೆ-ನಿದ್ದೆಗೆಟ್ಟ ಸೇದೆಯ ಸುಯ್ಲಿನಂತೆ ಗಾಳಿಯೆಸಗೆಯುಂ-ಕಣ್ಬೂಗುವಂತೆ ತಂಗಾಳಿಗೆ ಮರಂಗಳಲುಗೆಯುಂ-ಕಣ್ಣ ಕೆಂಪಿನಂತೆ ಮೂಡು ಸಂಜೆ ತೊಳಗೆಯುಂ ಸುಮವಿಕಸನ-ಸಂಭ್ರಮದಿಂ ದುಣ್ಮಿದ ಬೆವರಂ ತೆಲೆಗಳೊಳ್ ಕಿರುವನಿಗಳ್ ಸೊಗಯಿಸೆಯುಂ - ಕಾಳೆಗವಡೆಗಳಗ್ಗಳಿಕೆಗಳನೀಕ್ಷಿಪ ಬೆರಗಿಂದಿರುಳೊಳರಗದನಂತೆ ಪಗಲರಸಂ ಬಿಸುಗಯ್ಗಳಂ ನೆಲನೊಳೂರಿ ಮೂಡುವೆಟ್ಟಿಂ ನಿಲ್ಕಿ ನೋಡುತಿರ್ಪುದುಂ ಪರಿನಿರ್ವರ್ತಿತ ಪ್ರಾತಃಕರ್ಮರಾಗಿ ವೀರಸೇನಾಗಣಂ ನೆರೆಯೆ —

ಕೌರವ ಪಾಂಡವಾನುರಾಗಾಭಿಮಾನಿಯುಂ ಮಹಾಸತ್ವನುಂ ಜ್ಞಾನಿಯುಮಪ್ಪ ಗಂಗಾಸೂನುವುಂ-ಕೌರವ್ಯ ಕೌಂತೇಯ ರಣಕೌಶಲಾಚಾರ್ಯನಪ್ಪ ದ್ರೋಣಾಚಾರ್ಯನುಂ—ಅನನುಭೂತ ತಿರಸ್ಕಾರ-ವಚಸ್ತೋಮನುಂ ಬದ್ಧ ಗುರುಪ್ರೇಮನುಮಪ್ಪಶ್ವತ್ಥಾಮನುಂ-ಸುಯೋಧನ ಮಾನಿತ ಪ್ರಧಾನನುಂ ಪ್ರಿಯ ಮಿತ್ರನುಮಪ್ಪ ಮಿತ್ರಪುತ್ರನುಂ - ಮತ್ತವಾರಣಾರೋಹಣಸಮರ್ಥನುಂ ರಿಪುವಾರಣ - ವಿದಾರಣಾಸಾಧಾರಣ – ಪ್ರಹರಣ-ಶಕ್ತನುಂ ಹಸ್ತಿಸೈನ್ಯಾಧಿಪನುಮಾಗಿ ಪೆರ್ಮೆವೆತ್ತ ಭಗದತ್ತನುಂ-ವೈರಿವಿಜಯೋಪಾಯ ತಂತ್ರಬುದ್ಧಿಬಲನಪ್ಪ ಸೌಬಲನುಂ—ದುಶ್ಶಾಸನ ವಿಕರ್ಣ ದುರ್ಮರ್ಷಣ

ಮುಂತಪ್ಪ ಕುರುವೀರ ಸಹೋದರರುಂ-ಲಕ್ಷಣಾದಿಕೌರವ ತನೂಜ
ನಿಕಾಯುಮುಂ-ಸಿದ್ಧಕರಿರಥಾಯುಧರಾಗಿ ರಣೋತ್ಸಾಹಪೂರ್ಣರ್
ಗೊಂದಣಿಸಿ ನಿಲೆ-ದುರ್ಯೋಧನಂ ನಮಗೀಗಳಾವುದು ಕಜ್ಜಮೆಂದು
ಪ್ರಸ್ತಾವಿಸಿದಾಗಳ್ ಪತ್ತೆಯಿರ್ದ ದ್ರೋಣಸುತನಿಂತೆಂದಂ—

ಕಂದ|| ಕುರುಬಲಮಾಗವಿಪಿನಮೆ
ನ್ನಿಂದು ಬಲಮುಂ ಸಾರ್ಗೆ ಯುದ್ಧಭೂಮಿಗೆ ಭರದಿಂ ||
ಪುದುಗೊಂಬಂ ಪಾಂಡವರಂ
ಕದನಕ್ಕಡುನೀರ್ಗೆಯಂಗ್ಗಿ ನೆರವಾಗುವವೋಲ್ ||೨೩||

ಇನ್ನಿದರೊಳ್ ಮಂತಣಮೇ
ನನ್ಯಮೆ ಸರ್ವಾನುಮತಮಿದೆನೆ ತನ್ಮತನುಂ ||
ಮನ್ನಿಸದ ಕರ್ಣನೆಂದಂ
ಜನ್ನವಿರನ ಮತದ ನುಡಿಗೆ ಸಹಮತಮೆ ಗಡಾ! ||೨೪||

ಘೊನೆಗಂತಾಗಾಗದಿನ್ನೆಬರಮುರಿಗಳೊಳ್ ಕೂಡದೇಂ ಕೂಡಿ ಬಾಳ್ವಾ
ಮನಮೇ ಪೋ ಕೂಡದಾನಲ್ ಬೆದರ್ವ*ನಿವನ ನಾಣ್ಗೆಟ್ಟ ಮಾತಿರ್ಕೆ ಕುಂತೀ ||
ತನಯರ್ ಬಾಳ್ದಿರ್ಕೆ ತದ್ರಾಷ್ಟ್ರಕೆಗೆ ತೆರಳುತಿರ್ದರ್ಥವದೊಳ್ ತಾಗುಗೆವಿನ್ನು
ವೊನೆಯೊಡ್ಡಿಂತೆಂದು ದುರ್ಯೋಧನನ ನುಡಿಯಲಾ ದ್ರೋಣಿಗಾ ಮಾತಸಹ್ಯಂ ||೨೫||

ಗದ್ಯ|| ಅಂತೆಸಹ್ಯಮಾಗೆ ತಾ ನಿಂತೆಂದಂ—

ಉಂ ತರಿಸಂದುಡಂ ಸಕಲಸಭ್ಯರ ಭಾವವಿದಂ ನಿವೇದಿಸ
ಲ್ಕಿಂತು ಮತೀಯ ವಿದ್ವಿಷತೆಯಿಂ ಧರಣೀಸುರ ನಿಂದೆಗೆಯ್ವ ಮಾ||
ನಾಂತಕ ಕಾರುಗುರ್ ವಿಮುಳವಕ್ತ್ರದೊಳಂ ಕೊಳಗಾಂಬ ಮಾಳ್ಕೆಯಾ
ಯ್ತಿಂತದಕಸ್ತ ಸೂಕ್ಷ್ಮಮತಿಯೇ ನಿನಗೆನ್ನೊಡನಿಂತು ಗರ್ವಮೋ||೨೬||

ಗದ್ಯ|| ಆದಂ ಕೇಳ್ದು ಕರ್ಣನರ್ಣವದಂತೆ ಮಾರ್ಮಸಗಿ –

ಕಂದ|| ಗುರಿಗೆಯ್ದು ಕದನಕಿದು ತಾಂ
ನೆರೆಪೀಳಿಗೆಯಕ್ಕೆ ಚಳಕಮುಂ ಪೆರ್ಚುಗೆ ಜೀ||
ಸರೊಡಂ ಪಿಂಗುಗೆ ತೋಳ್ಗಳ
ತುರಿಪಂ ಪೋಕೆಂದು ನಿಂದು ಬಿಲ್ಗಣೆಯಾಂತಂ ||೩೭||

ಎನ್ನ ತರಿಸಲವೊ ಬಲಪೋ
ಜನ್ನವಿರನ ಪೇಳ್ದ ತರಿಸಲವೊ ಬಲವೋ ಮೇ
ಜೆನ್ನಿವರೊಳ್ ಮಾನ್ಯಮೆನಿ
ಪ್ಪನ್ನವನಾಂ ದ್ರೋಣಿಗಾಂತು ತೋರ್ದಪೆನೀಗಳ್ ||೩೮||

ಗದ್ಯ|| ಎಂದು ಬಿಗುರ್ತು ನಿಲೆ ಸತ್ರಾಣನಪ್ಪಾ ದ್ರೋಣ ಪುತ್ರನುಂ ತೆನ್ನುಪಾರ್ಜಿತ-ಸತ್ವಾಲೋಕನವಿಾಗಳೆ ಆಕ್ಕೆಂದು ಹಂದದೆ ಕೆಯ್ಕೊಡ್ಡೆ-ಇಂತಸಕಳಿಯೆ ಕಾಳೆಗದೋಂಟೆದ ಗೆಲ್ಲಡಕೆಯಂ ಪರಿನ ಪಡೆಕೊಕ್ಕೆ ಮುರಿಯದೆಂತು ಮಾಣ್ಬುವೆಂದು ಸುಯೋಧನ ನವರ ಸೆಮರಮುಂ ಮಾಣಿಸಿ – ತಾಂ ಕರ್ಣಪಕ್ಷವಾದಿಯುಂ ತೆದಾಲೋಚನಮೆ ಪರಮಫಲಪ್ರದಂ ಮನ್ಯನುಮಾಗಿರ್ದುದರಿಂ ದೋರಗೆಗೆ ಬೀರವಡೆ ಪೋಗಿ ತಾಗುಗೆಂದನುಮತಿಸೆ – ಕರ್ಣನಿಂ ದುಪೇಕ್ಷೆಯುಮನಾಣ್ಮನತ್ತಣಿಂ ನಿರ್ಲಕ್ಷತೆಯುಮುಂ ಪರಿಭಾವಿಸಿದಾ ದ್ರೋಣಿ ಸೀಡುಂ ನೋಡಿ —

ಕಂದ|| ತಿಳದವರ್ಗ*ಳ್ ತಿಳಿನುಡಿವರ್
ಕುಳದವರ್ಗ*ಳ್ ರಾಜಮಾನ್ಯರಿಂದಾಗರ್ ಪೋ ||
ತಿಳಿಯದರಳಿನುಡಿನುಡಿವರ್
ಕುಳಹೀನರ್ ಮಾನ್ಯರಲ್ತೆ ಕಾಲಮಹಿಮೆಯಿಂ|| ||೩೯||

ಹೀನರನೆತ್ತುವ ನೆವದಿನ
ಹೀನರ ನಿಳಿಕೆಯ್ಯ ಬಾರ್ತೆಯೇಂ ಕಾಲ್ಗೆಸರಂ॥
ನೂನಗೊಳಿಸಲ್ಕೆ ತೆಗೆದದ
ನಾನನಕೇಂ ಸಮರಿದಮರೆ ಬಲ್ಲವರಿಳೆಯೊಳ್ ॥೩೦॥

ಗದ್ಯ॥ ಎಂದು ತನ್ನೊಳೆ ನೊಂದು ತಾನುತ್ತಮ ಶಕುನವಿದ ನಪ್ಪುದರಿಂದಣೆಗೆಂತಾನುಂ ಸೇವೆಮಾಗದೆಂಬುದಂ ಬಗೆದು ತಾನುಮುಪೇಕ್ಷಿತನಾದ ಕತದಿಂದೊಡನೆ ಬರಲಣ್ಮದೆ-ಕರ್ಣನ ಮಾತಂ ಪಿಡಿದು ನಡೆಯೆ ತನ್ನವಜ್ಞೆ ಸೇನೆಗಮಕ್ಕೆ – ಎಂದು ನಿರ್ಣಯಮಾಗಿ ಮುಂದೆ ಪೂಣ್ದು ನುಡಿದು —

ಬಾರದೊಡೀತನೇಂ ಕಿರಿದೆನಿಪ್ಪುದೆ ಸೇನೆ ಪರಾಕ್ರಮಂ ತಿರ
ಸ್ಕಾರಮನಾಂಪುದೇ ಎನುತಿರಲ್ಕನಜಾದಿಗಳಲ್ಲಿ ಪಿಂತಿನಿಂ॥
ಕೂರದುದೇನೆನಲ್ ಪಿರಿಯುರುಂ ನಿಲದೆಯ್ದಿದನಂದು ಗೇಹಮಂ
ಬಾರಿಪರಾರುಪೇಕ್ಷಿತ-ದುಹಾ-ಮಹಿಮಾನ್ವಿತನಂ ಧರಿತ್ರಿಯೊಳ್ ॥೩೧॥

ಗದ್ಯ॥ ಆಗಳ್ ಪೆರಗಿರ್ದ ಭೀಷ್ಮ ಕೃಪಾದಿಗಳ್ ಮುಂಬರಿದು ಪರಿಯನರಿದು ನಾರದೇರಿತದಂತೆ ಕಾರ್ಯಮಂ ಸಾಧಿಸಡೊಡೆ ತತ್ಕ್ಷೇಪಪಾತಮುಂ-ಗುರುಸುತ-ತಿರಸ್ಕಾರ-ರೋಷಮುಂ-ಗುರುಜನ ವೈಮುಖ್ಯ ದೋಷಮುಂ – ಮುಪ್ಪುರಿಗೊಂಡು ಕ್ಷೇಮನಾಶಮುಂ ಮಾಡದಿರದೆಂದು ಸುಯೋಧನನ ನೊತ್ತಂಬದಿಂದೊಡಂಬಡಿಸುತ್ತೆ ಪಾಂಡವರ್ಗೆ ತಾಮೆ ನೆರವಪ್ಪುದೆ ನೇರ್ಪುಂ ವಿಹಿತಮುಮೆಂದು ನಿರ್ಣಯಿಸುವುದುಂ —

ಕಂದ॥ ಮುನ್ನಿಂದ ಮಂತಣಂ ದಲ್
ಬಿನ್ನಗೆ ಪೋದೆತ್ತನುತ್ತೆ ಕರ್ಣನುಮಾಗಳ್॥
ಕೆನ್ನಂ ಬಗೆಯೊಳ್ ಬೇಸರೆ
ತನ್ನಯೆ ಪೊಂಕಮುಮುದೊಡನೆ ತರ್ಗಿತ್ತಾಗಳ್ ॥೩೬॥

ಗದ್ಯ॥ ಅಂತೀ ಕೌರವನ ಕೊಂಕಂ ಸಮರಿ ತಿರ್ದಿ ದಾಯಾದ್ಯರೊಡನೆಂತು ಕೂಡಿಸುವೆನೆಂಬಾಲೋಚನಾಂತರದಿಂ ಭೀಷ್ಮದ್ರೋಣ ಕೃಪರ್ಗಂ-ಪಿರಿಯರ್ ತನ್ನಿಚ್ಚೆಗೆ ತಡೆಯಿಕ್ಕುವರೆಂದಾ ಚಲದಂಕನಪ್ಪ ದುರ್ಯೋಧನಂಗಂ-ತಮ್ಮ ಬಗೆದ ಬಗೆ ಬೀತುದೆಂದು ಕರ್ಣ ಶಕುನಿಗಳ್ಗಂ-ಇಂತಪ್ಪುರೆ ಬೇಸರೆ ತಮ್ಮ ಪೆಂಪೆತ್ತಸ್ತೆಂದು ಸೈಂಧವ ಮುಂತಾದವರ್ಗೆ ಮುತ್ಸಾಹಂ ಕಿಡೆ-ಅದೆ ಪಡೆವಯಣಕ್ಕಕ್ಷೇಮ ಸಂಧೇಶಮೆನಿಸೆ ಸೇನೆ ಪೋಗುತಿರ್ಪುದುಂ—

ಅದೇ ಪೊಳ್ತಡೆಯೊಳಿತ್ತಲ್ ದ್ವಾರಾವತೀ ಪತ್ತನದೊಳ್ ತಂತಮ್ಮ ವೀರ ಪತ್ನಿಯರಿಕ್ಕಿದಕ್ಷತೆಯುನೆತ್ತಿದಾರತಿಯನೊತ್ತಿದ ತಿಲಕದ ಪರಸಿದ ಪರಕೆಯ ಸಿಂಗರಿಸಿದ ಬೀರದುಡುಗೆಯನಾಂತು ಪೊಂಕದಿಂದೆಯುಂ ಬೀರಮುಸಕದಿಂದೆಯುಮುರ್ಕಿನಿಂದೆಯುಂ ಪೆರ್ಚಿ ಪೆಂಪುವಡೆದು—

ಕೊರ್ಬಿದಬಾಡ ರಟ್ಟೆಗಳ ಕೈದಿನ ಕಯ್ಗಳಪೊಂದಗುರ್ವಿನಿಂ
ದುರ್ಬಿದ ತೋರಪುರ್ಬುಗಳ ಕೆಚ್ಚನೆಗಂಗಳ ಲಾಘವಾತಿಸ॥
ದರ್ಭದ ಟೌಳಿಯೊಳ್ಸವಗ ಚಲ್ಲಣ ದಟ್ಟೆಯನಾಂತ ಬೀರಜೋ
ದರ್ಬರುತಿರ್ದರ್ ರಿಚ್ಚೆಯುರ ಸಾಣೆಯೆನುತ್ತುರಿ ಗುಂಡುಗುಂಡಿನಿಂ ॥೩೭॥

ಗುದಿಯಂ ಕೀಸಿ ಕೆಲಂಬರುಂ ಪಿಡಿದು ಕುತ್ತುಂಗೋಲ ಕೂರ್ಗೆಸುತಾ
ಯದ ಬಾಳಂ ಮಸೆದದ್ದಣಂ ದಳೆದು ಪೆರ್ಗಿಚ್ಚಂಬುಮಂ ತಾಳ್ದು ಜು ||
ದ್ದದೆ ಬಾಗಿರ್ದ ಸರಲ್ಗಳಂ ಸಮರಿ ಕಲ್ಗುಂಡಂ ತಗುಳ್ಚುತ್ತೆ ಮುಳ್
ಗುದಿಯಂ ತಾಮುಳವಟ್ಟರಾ ಸುಭಟರಂತೋರೊರ್ವರಾ
ವೇಳೆಯೊಳ್ ||೩೪||

ಮಸಕದ ಸುಯ್ಲಿನಾಂತ ಪಗೆಯುಂ ಬಿಸುಸುಯ್ಯಿಪ ಬಯ್ದು ನೋಡಿ ಬಾ
ಗಿಸುವೆರ್ದೆ*ಗೊಂಡು ಕೊಲ್ವ ಕುಡುವುರ್ಗೆಗೇರಿಸಿ ಪುತ್ತನೇರಿಪಾ ||
ನಸೆಯುಳಿದೌಂಡು ಗರ್ಜಿ ಪುಡಿವುಲ್ಲನೆ ಕರ್ಜಿಪ ಕಂಗೆರಳ್ಚಿ ನಿಂ
ದೊಸೆಯಪರಂ ಮರಳ್ಚಿಪ ಭಟರ್ ನೆರೆದರ್ ಪುಕದಲ್ಲಸಂಖ್ಯೆಯಿಂ ||೩೫||

ತುಡುಂಗೆಯೊಳೊಂದೆ ದೇಹಪರಿಮಾಣದೆ ಸಾಟಿ ಮಹಾ ಪ್ರತಾಪದೊಳ್
ಪಡಿಯೆನಿಸಿರ್ದುವೊಂದೆ ಪದದೊಳ್ ಗುರಿಯಿಟ್ಟೆಸಗುಂ ನಿರೀಕ್ಷ್ಯಮಂ
ತಡೆಯದೆ ನೋಡುಗುಂ ಪಿರಿದುಮೂಲಿಕು ಮಟ್ಟುಗು ಮೆತ್ತಿ ಪಜ್ಜೆಯಂ
ಮಡಗುಗುಮಾಣ್ಮಸನ್ನೆಗಳನೆಂಬರು ವೀರರೆ ವೀರರೊಂದಿದರ್ ||೩೬||

ಗೋಸಣೆ ಮಾರೆ ಗಾಲಿಯುರುಳಲ್ ರಥಿಕಾಜ್ಞೆಯೊಳಾಗಳಲ್ಲಿಗೋ
ಲ್ಲೆಸಿದುವಾಕ್ಷಣಂ ಕುದುರೆಗಳ್ ಸೆಳೆದೆಯ್ತರೆ ತೇರ್ಗಳೋಳಿಯೊ||
ಟ್ಟೈಸಿರೆ ನೋವುಮುರ್ದುಚಿತ ನೀರಘಟಂ ಬಿರುಸಂಕುಗೈದುಗಳ್
ಭಾಸುರವಾಗೆ ಮೌಕ್ತಿಕದ ರನ್ನದ ಬೆಳ್ಳಿಯ ಪೊನ್ನ ಸಿಂಗರಂ ||೩೭||

ಇಂಬೆನೆ ಪಲ್ಲಣಂ ನಿರಿಸಿ ಕೆನ್ನಮಲಂ ಕ್ರಿಯೆ ಗೈದು ಕೀಳ ನೇ
ಣಂ ಬಿಗಿದೋಡುವಾ ಗರುಡ-ವಾಯು-ವಿಮಾನ-ಮನೋಸುವೇಗಮಂ
ತಾಂಬರಿದೆಂಬ ವೇಗದ ಮನೋಜ್ಞದ ಸಾಜದೆ ಕಾಲ್ಕೊರಲ್ಗಳು
ಪ್ಪಂಬಿಡಿದೊಂದಿ ಲಕ್ಕಣವನೂಪ್ಪಿದು-ವಾಹವ ವಾಜರಾಜಿಗಳ್ ||೩೮||

ಕಂದ॥ ಪಡುವಣ ಕಾರ್ಮುಗಿಲೊಡ್ಡಂ
ಪಡಿವರಿಸುವ ತೋರಮೆಯ್ಗಳುಣ್ಮಿವಾ ಮುದದಾ॥
ಜಡಮುಂ ರಾಜಿಸುವಾನೆಯ
ಗಡಣಂಗಳ್ ನೆರೆದುವಲ್ಲಿ ಸಿಡಿಲಿನ ದನಿಯಿಂ ॥೩೯॥

ಗದ್ಯ॥ ಅಂತೆಗುರ್ವುತ್ತಾ ಗೋಹುರದ ಸಿರಿಯದರದೊಳಳವಟ್ಟು ಪೇರಣಿಯಿರುತ್ತಿರ್ಪಿನಂ—

ಆವನ ತೇರುಪಂ ಪಳಿವ ಸೋಬೆಯ ತೇರಿರೆ ಮೇಘವರ್ಣ-ಸು
ಗ್ರೀವ-ಬಳಾಹ-ಶೈಬ್ಯ ವೆಸರಾಂತೆಸೆ ವೀರೆರಡುಂ ಹಯಂಗಳಂ॥
ಭಾವಿಸಿ ಕಟ್ಟಿ ತತ್ವರವು ಸಾರಥಿ ದಾರುಕನೇರಿ ಸಾಯುಧಂ
ಶ್ರೀವರನಾಗಳಲ್ಲಿ ಬರಲೇಂ ಜಯನಿಸ್ವನಮಾಯ್ತೊ ನಾಕದೊಳ್ ॥೪೦॥

ಗಂಭೀರಂ ಮೊನೆಗಗ್ರಗಣ್ಯನುರು ಸಾಮರ್ಥ್ಯಂ ಕಠೋರಾಹವಾ
ರಂಭಂ ಗಂಡರ ಗಂಡರುರ್ಕುಗಿಡಿಪಂ ಸೂರ್ಯೇಂದು ತೇಜೋಯುತಂ
ಜಂಭಾರಿಸ್ತುತನಿಂ ವಿರೋಧಿ-ವಿಜಯಾಶ್ಲೆಷಾತಿ ಸಂತೋಷದಿಂ
ಜೃಂಭಿಕ್ಕೆಂದೆನೆ ವಂದಿಜಾಲ ಮೆಸೆದಿರ್ದಂ ದೇವಕೀನಂದನಂ ॥೪೧॥

ಎಂಬಲ್ಲಿಗೆ ಸತ್ವಾಲೋಕನ ಕಾವ್ಯದೊಳ್
ನಾರದ ತಂತ್ರ – ಸಮರ ಸನ್ನಾಹಂ
ಪಂಚಮಾಶ್ವಾಸಂ



# ಯು ದ್ಧ ವ ರ್ಣ ನ ೦

## ಷಷ್ಠಾಶ್ವಾಸಂ

ಕಂದ|| ಶ್ರೀರಮಣನ ಬಹುಸೇನಾ
ಸಾರಮುದರೊಳೇಳ್ವ ಧೀರ ವೀರರಸಕ್ಕಾ
ಗಾರದ ಮೇರೆಯೆ ಮೀರಿದು
ದಾರದ ನರಿಯಿಪೊಡೆ ಬಲ್ಲರೆಂಬಿನ ಮಾಗಳ್ ||೧||

ರಾಮಂ ಕಾಳಿಗಕೆಯ್ದುವನ್ನವೊಡನಾ ಸೌಮಿತ್ರಿಯಾಂತಿರ್ದ ಸ
ಪ್ರೇಮೋತ್ಸಾಹ ವಿಭಾವವೀಯುಗದೆ ಮಾರ್ಪಟ್ಟತ್ತೆನಲ್ ಕ್ರೋಧನಿ
ಸ್ಸೀಮಂ ರಾಮನ ಶೇಷ-ದುಷ್ಟ-ವಿಷಮಂ ಸಸ್ಯಂದನಂ ಬೇಗದಿಂ
ದಾಮ್ನುನ್ನೆಂಬಿನ ಮೆಯ್ದಿ ಮುಂದೆ ಹಲಿ ನಿಂದಂ ಯಾದವ
ಪ್ರಾವೃತಂ ||೨||

ಗದ್ಯ || ಮತ್ತಂ ಚಾರುಧೇಷ್ಣ-ಸುಧೇಷ್ಣ-ಪ್ರದ್ಯುಮ್ನ ಮಂತಪ್ಪ ರುಕ್ಮಿಣೀ ತನೂಜರುಂ-ಭಾನು-ಸ್ವರ್ಭಾನು-ಮುಂತಾದ ಸತ್ಯಭಾಮಾ ಸೂನುಗಳುಂ – ಸಾಂಬ – ಸುಮಿತ್ರ – ಪುರುಜಿತ ಪೆಸರರಿಕೆಯ ಜಾಂಬವತೀ ಪುತ್ರರುಂ-ಅಶ್ವಸೇನ-ವೀರಚಂದ್ರ-ಪ್ರಮುಖ ಸತ್ಯಾದೇವೀ ನಂದನರುಂ-ಕವಿ-ವೃಷ-ವೀರ ಮುಖ್ಯ ಕಾಳಿಂದೀ ಜಾತರುಂ-ಗೋತ್ರವಂತ-ಸಿಂಹಬಲಾದಿ ಮಿತ್ರವಿಂದಾ ಕುಮಾರರುಂ-ಜಯ-ವಾಮನ-ಸುಭದ್ರ-ಸಂಗ್ರಾಮಜಿತ್ತೆಂಬ ಮೊದಲಪ್ಪ ಭದ್ರಾದೇವೀ ಸಮುತ್ಪನ್ನರುಂ-ಮುಂತಾಗಿಯಷ್ಟಮಹಿಷಿಯರ್ಗೆ ಪುಟ್ಟಿದ ಮಕ್ಕಳುಂ

ಭ್ರೂಭಂಗ ವಿಕಟ ನಿಟಲತಟರುಂ-ಕೋಪಾರುಣ ಕಿರಣ-ಪ್ರಸಾರಣ ರಣಭೀಕರ-ಕಾರಣ-ಕೇಕರರುಂ-ಭುಜಕಂಪನ ಪ್ರದರ್ಶ್ಯಮಾನ ಸಂಗ್ರಾಮಲಾಂಪಟ್ಯರುಂ-ಅರಿಶಿರಃ ಖಂಡನ-ದಂಡನಾ-ಪರಿಣತಾಂತಃ ಕರಣರಂ-ರಿಪುದ್ವಿಪ ಚಮೂ-ಸಮರ-ವಿಫಲ-ಕಾರ್ಯಾರ್ತಿ ನಿಪುಣರಂ-ಪ್ರತಿರಥ-ಮನೋರಥ-ವಿಕಥ-ವ್ಯಥಾ-ಪ್ರದಾತ-ವಿಖ್ಯಾತ ಯುದ್ಧವಿದ್ಯಾಧೀತರುಂ-ಪ್ರತಿಹತಿ-ವಿಲಂಘನ-ಹತ್ಯಲಂಘನ-ಸಂಗರ ಪ್ರದರ್ಶಕ ವಿಕ್ರಾಂತತುಂಗರುಂ-ಸುಕ್ರಮ-ಪರವಿಕ್ರಮ-ಸ್ತಂಭನ ಪರಾಕ್ರಮ-ಗಂಭೀರರುಂ-ಅಂತಿಂತುಮಿಟ್ಟಣಿಸಿ ಕಟ್ಟಾಯದಿಂದಾ ಪಟ್ಟಣವಾಗಿಲೊಳೊಡ್ಡೊಡ್ಡಿ ನಿಲ್ವುದುಂ ಪಡೆವಳರರ್ದೆಗಾರಿಕೆಯ ಬೀರನುಡಿಯಂ ವಿಭುವಪ್ಪ ವಾಸುದೇವಂಗೆ ಕೇಳಿಪೆನೆಂದವರಂ ನೀಮೆಂ ಬಲ್ಲಿರೆಂದಣಿವಳನೆನೆ ಮೊನೆಗೆಳೆಯನೆಂಬನಂಬಿನ ಮೊನೆಯುಂ ಮುನ್ನೀಡಿ ಮುಂದೆ ನಿಂದು—

ಕಂದ॥ ದ್ವಿರದಂ ಸರಸಿಯ ಪೊಕ್ಕಾ
ಶರಜಪನಾ ಕೈರವಾಸ್ವಿತವ ಕೀಲ್ವಂತಾಂ ॥
ಧುರದೊಳ್ ಪಾಂಡವರಂ ತ
ತ್ಕುರುಸೇನಾ ಸಹಿತ ಮುರದೆ ಮುರಿಯದೆ ಮಾಣೆಂ ॥೩॥

ಗದ್ಯ॥ ಇಂತೆಂದ ಮರುನುಡಿಯೆ ತನ್ನದಾಗೆ ಪಗೆಗೇಡಿಯೆಂಬಂ ಹುರಿ ಮೀಸೆಯಂ ತಿರುಪುಮಾಡಿ ನೀಡಿ ತಾನಿಂತೆಂದಂ —

ಪಗೆಗಳ ನೆತ್ತರಿಂದೆ ದೆಸೆಯಾನೆಯ ದಾಡೆಯ ಕೆಂಪು ಮಾಡುವೆಂ
ಪಗೆಗಳ ರುಂಡಮುಂ ದೆಸೆಗಳಾಣ್ಮರ ಪಾದನತಂಗಳಾಗಿಪೆಂ ॥
ಪಗೆಗಳ ಕೈದುವಿಂ ದೆಸೆಗೆ ಬೇಲಿಯನಾಸುರದಿಂ ನೆಗಳ್ಚುವೆಂ
ಪಗೆಗಳ ಕೊರ್ಬಿದಟ್ಟೆಯುಡಗಿಂ ತಣಿಪೆಂ ಪಸಿವಂ ಮರುಳ್ಗಳಾ ॥೪॥

ಗದ್ಯ ॥ ಆಗಳ್ ನಾರಣಿಯಂ ಕೊಲ್ವುದೆನಿವಿರಿದೆಂಬರಿ ಭಯಂ ಕರ ನೆರಿಬಾತಂ ನಿರ್ಭೀತ ನಿಂತೆಂದಂ —

ಕಂದ॥ ಯಮಸುತನಂ ನೀದರ್ಾಂಟಿಸಿ
ಸಮಾರಜನ ಕುತ್ತಿ ಕೆಡಹಿ ಮೊನೆಯೊಳ್ ಮೊನೆಯೊಳ್॥
ಯಮಳರ ಕಾಪಿಟ್ಟಾಂ ಸಂ
ಭ್ರಮಿಸಿ ನರನಂ ಮರಳ್ಚಿ ತರ್ಪೆಂ ಗಯನಂ ॥೫॥

ಗದ್ಯ ॥ ಅದರ್ಕವರೆಲ್ಲರಂ ಮಾಣಿಸಿದಳಿಗಗ್ಗಳನೆಂಬ ರಾವುತ ರಗ್ಗಳಿಯಂ —

ಕಂದ॥ ನುಡಿಯಲ್ವೇಡಂ ಕಣ್ಣಂ
ಮಿಡಿದೊಡದೇ ಆಣೆಯೆನಗೆ ಹರಿ ಹಲಧರರಿಂ॥
ಕಡುಗಲಿತನದಿಂ ನರನಂ
ನಡುಗಿಸಿ ಖೇಚರನನೆಳೆದು ತಂದಪೆನೆಂದಂ ॥೬॥

ಗದ್ಯ ॥ ಆಗಳ್ ಸಮರೈಕ ವೀರನೆಂಬುರು ವೀರನೆಂದಂ —

ಕಂದ॥ ಈಯಾನೆ ಕುದುರೆ ತೇರ್ಗಳೊ
ಳಾಯತಿಯೇಂ ಮೆಯ್ಗೆ ತಾಂಟುಗುಂ ರಣದೆಡೆಯೊಳ್॥
ಬೀಯದೆ ಬೀರದೆಯಾಂತುವ
ಜೇಯಂ ತಾನೆನಿಪೆನಿಂದು ತರ್ಪೆಂ ಗಯನಂ ॥೭॥

ಗದ್ಯ ॥ ಅನ್ನೆಗಮಂಕ ಕೋಲಾಹಲನೆಂಬಂಕದ ವೀರನಂತಿಕಮಂ ಸಾರಿ —

ಕಂದ॥ ಅಸುರನಿನೀ ವಿಸ್ತರತರ
ರಸೆಯುಂ ತಂದವನ ಬಂಟನೆಂ ನರನಿಂದಾ॥
ನಿಸದೆಯೆ ತರ್ಪೆಂ ಗಯುನಂ
ಪುಸಿಯಕ್ಕುಮೆ ದೇವ ಎಂದನೊರ್ವನಗುರ್ವಿಂ ॥೮॥

ಗದ್ಯ॥ ಈ ಮುಂತಪ್ಪ ಶೌರ್ಯವದ್ವೀರವಾಕ್ಯಂಗಳೆತ್ತಲುಂ ಪುರುಷೋತ್ತಮನಂ ಪಿರಿದುಮುಲ್ಲಾಸಂಗೊಳಿಸೆ. ಪೆರ್ಚಿಪೆರ್ಚಿದ ವಾರಿನಿಧಾನ-ನಿನಾದಮಂ ಕೇಳ್ಗೈವ ಭೇರೀಸಿನದದಿಂ ತೀವ್ರ ಗಾಮಿಯಾಗಿ ಸಂಗ್ರಾಮ ರಂಗಕ್ಕಾ ಪಡೆ ಬರ್ಪುದು—

ಕಂದ॥ ಬಲಮೇವುದು ಪೆಲ್ಲಿದು ಹೃ
ದ್ಬಲಮೆ ಬಲಂ ವಲಮೆಸುತ್ತುಮನಿವಾರ್ಯರಚಂ ॥
ಚಲರನತರ ಖಂಡಿತರ
ಸ್ಖಲರಿರ್ಪಿನಮುಲ್ಲಿ ಪಾಂಡುಜಾತರಯೂಥರ್ ॥೯॥

ಗದ್ಯ॥ ಆಗಳೆ ಭೀಷ್ಮದ್ರೋಣ ಕೃಪಾದ್ಯರಂ ಮುಂತಿಟ್ಟನ್ಯೋನ್ಯಾನುಕೂಲ ಚೆಹ್ನೆಯುಂ ಕಾಣಿಸಿ ಪರೆಯ ಸರಮುಮಂ ನಿಲಿಸಿ ಪೊನೆಗೆ ನೆರವಪ್ಪಂಕುಟಾ ಕುರುಧ್ವಜಿನಿ ಪತ್ತೆವರೆ—

ಕಂದ॥ ಪೊಸತೆಯ್ದಿ ನೆರೆಯೆ ಬಲದೊಡ
ನೆಸಗಿದುದಂ ಮರೆತು ಹಿತಸಹೋದರನೆನೆ ಭಾ ॥
ವಿಸುತನುಜರ ಕೂಡಿಯೆ ಮ
ನ್ನಿಸಿದಂ ಗಾಂಧಾರಿಯುಣುಂಗಸಂ ಜವನಣುಗಂ ॥೧೦॥

ಗದ್ಯ॥ ತದನಂತರಂ—

ಅಳವಟ್ಟೊಪ್ಪುವ ಯುದ್ಧನಾಟ್ಯ ಪಟು ಯೋಧಾನೀಕವಂ ಪೀಠಿಕಾ
ವಿಳಸನ್ನಾದದಿನಲ್ಲಿ ರಂಗಕೆಳಸಲ್ಕೆಂಬಂತೆ ಕೌರವ್ಯ ಸಂ
ಕುಳದೊಳ್ ಯಾದವ ಸೈನ್ಯ ಸಂಕುಳದೊಳಂ ಭೇರಿ ಸ್ವನಂ ಶಂಖಕಾ
ಹಳೆಯುದ್ಯದ್ಧ್ವನಿ ಢಕ್ಕೆಯಾರವಮುದತ್ತಂ ಪರ್ವಿತಾ
ಪ್ರಾಂತದೊಳ್ ||೧೧||

ಇದು ಸಮ್ಯಗ್ ನೃಪಧರ್ಮಯುದ್ಧ-ಶಪಥೋಕ್ತಿ-ಧ್ವಾನ-ಸಂದೋಹಮಿಂ
ತಿದಧೀರಧ್ವನಿ-ಪಾತನೋರುನಿನದಂ ದ್ವಿಣ್ಮಾನಸಾಂಭೋಜ ಷಂ ||
ಡದೆ ವೀಚೀಕ್ರಿಯಮಾಣ ದಂಡ ಹತಿಯುದ್ಧ್ವಾನಂ ಪ್ರತಿಧ್ವಾನ ಸಂ
ಪದ ಗರ್ವೀಕೃತ ದಿಕ್ಕು ತಾನಿದು ರಣಾರಂಭ-ಪ್ರಣಾದೋತ್ಕರಂ ||೧೨||

ಕಂದ|| ಆರಿರ್ದಪರಾರ್ ನೋಡುವ
ರಾರಿಸುವರ್ ಕಣೆಯು ಖಂಡಿಸುವರಾರ್ ಗುರಿಯಿಂ||
ಟ್ಟಾರಿಡುವರದಂ ಬಗೆಯಲ್
ಬಾರದವೋಲ್ ಕರೆದುವಲ್ಲಿ ಕೂರ್ಗಣೆ-ಮಳೆಗಳ್ ||೧೩||

ಗದ್ಯ || ಅಂತು ಸಮರಾರಂಭ ಸೂಚನೆಯಾಗೆ ಯದು ಕುರು ಬಲಂಗಳ್ ಪಡುವಣ ಮೂಡಣ ಕಡಲ್ಗಳೊಂದನೊಂದು ಪಳಂಚಿದಂತೆ ಪಳಂಚಲೆಯೆ—

ದಿಗ್ದಂತಿವ್ರಜಮಾರ್ದು ಪಾಯ್ಗುಮೆಸೆವೆಣ್ದಿಕ್ಪಾಲಕರ್ ಕೇಳ್ದು ದಿ
ಗ್ಮುಗ್ಧತ್ವಂ ಬಡುಗುಂ ನೆಲಕ್ಕೆ ಗಿರಿ ಮಣ್ಣಿಂ ಪತ್ತಿಕುಂ ಪತ್ತುಗುಂ ||
ರುಗ್ದೈನ್ಯಂ ರವಿಚಂದ್ರಮರ್ಗ್ಗೆನಿಸಿ ತಾನಿಂತಾಗೆ ಲೋಕಕ್ಕೆ ಸಂ
ದಿಗ್ಧಂ ಸೌಖ್ಯಮೆನಲ್ ಸರಂಗರೆದರಾ ಜೋದರ್ಕಳೀ ರೊಡ್ಡಿನಾ ||೧೪||

ಒಂದಸ್ತ್ರಂ ಪೆರತೊಂದನಿರ್ಕಡಿಗೆಯುಲ್ಕೊಬ್ಬಾಳ್ ಪಳಂಚುತ್ತೆ ಮ
ತ್ತೊಂದಂ ತಾಗೆಯುದೊಂದು ಡಾಣೆ ಗುದಿಯಂ ಮತ್ತೊಂದುಮಂ
ತಾಪಿನಂ ||
ಸಂದತ್ತೊರ್ಮೆ ಕಟಿಲ್ ಖಣಿಲ್ ದಡದಡಿಲ್ ಸದ್ದೆಳ್ದು ಕಿಚ್ಚಭ್ರದೊಳ್
ನಿಂದಾ ಯುದ್ಧನಿರೀಕ್ಷಕಾಳಿಯೊಡಲಂ ಸುಟ್ಟತ್ತದೇಂ ಭೀಕರಂ ||೧೫||

ಶರದಿಂ ತುಂಡಿಸುವರ್ ಕೆಲರ್ ಗದೆಯಿನಡ್ಡೈಪರ್ ಕೆಲರ್ ಮುಂದೆ ಬಿ
ತ್ತರಿಸುತ್ತತ್ತಪರಂ ದಗುಳ್ವರರೆಬರ್ ಪಕ್ಕಕ್ಕೆ ಪಕ್ಕಾಗಿ ತಾ
ವಿರುತುಂ ಬಾರಿಪರಂತು ಬರ್ಪ ರಿಪುಬಾಣವ್ರಾತಮಂ ಕಲ್ತಜೋ
ದರದೀರೊಡ್ಡಿನೊಳಿರ್ದಗುರ್ವುವಡೆದತ್ತಾ ರಂಗದೊಳ್ ಸಂಗರಂ ||೧೬||

ಕೈದುವದೊಂದೆ ಸಾಲ್ವ ಚದುರೊಂದೆ ಭಯಂಕರ ಸುಪ್ರಹಾರದಿಂ
ದೈದಿದ ವೈರಿಯಂ ನೆಲಕುರುಳ್ಚಿಪ ಶಕ್ತಿಯದೊಂದೆ ಸೂಳಿನಿಂ ||
ಸಾಧಿಸಿ ಗೆಲ್ಲಮಂ ಗಳಿಸುವಂಕದ ಬೀರರ ಬಿಂಕವೆತ್ತ ಪೋ
ಪೋದುದೆನಲ್ಕವಿರ್ವಲದವರ್ ಸಲೆಕಾದಿದರೊಂದು ಸಾಸದಿಂ ||೧೭||

ಅಸಮಾಸ್ತ್ರಂ ವಿಷಮಾಸ್ತ್ರಮಕ್ಷಯತರಾಸ್ತ್ರಂ ಭೀಕರಾಸ್ತ್ರಂ ವಿಷೋ
ಚ್ಛ್ವಸಿತಾಸ್ತ್ರಂ ಭ್ರಮಣಾಸ್ತ್ರಮುದ್ಧುರ-ಜಯಾಸ್ತ್ರಂ ವೈರಿಸಂದೋಹನಾ||
ಶಸಮರ್ಥಾಸ್ತ್ರಮನಂತರಾಸ್ತ್ರಮರಿದುರ್ಭೇದ್ಯಾಸ್ತ್ರಮಿಂತೆಂದು ಭಾ
ವಿಸಲುಂ ಬಾರದುವಸ್ತ್ರಮೇನಿಸುಗೆವೆತ್ತತ್ತಂದು ಶಾಸ್ತ್ರಾನುಗಂ ||೧೮||

ಒರ್ಬಂ ಮಾರಾಂತ ಮತ್ತೊರ್ಬನನಿಸುವ ತಗುಳ್ದಿಕ್ಕುವಾ ಖಡ್ಗದಿಂ ಪೋ
ಳ್ದಿ ಭಾಗಂ ಗೈವ ನೇರ್ವಾ ಪೊಡೆಮೂಡೆವುರೆ ನುಗ್ಗಾಗಿ ಮಾಳ್ಪೊಂದು
ಬಲ್ಪಂ ||
ಉರ್ಬಂ ತತ್ಕ್ರೋಧಮಾ ದುರ್ಧರತೆಯುಸಹನೀಯತ್ವ
ಮಾದ್ವೇಷಮಾಸಂ
ದರ್ಭಂ ಘೋರಂ ಗಭೀರಂ ಪಿರಿದಸಮಮುಮೇಯಾಸಹಂ
ಸುಪ್ರಸಿದ್ಧಂ ||೧೯||

ಕಂದ॥ ಶಿರವರಿಯೆ ಸುರಿವ ನೆತ್ತರ
ಸರಿಯಿಂ ತೊಯ್ದಾ ಶರೀರವದ್ಭುತ ರಸದಿಂ ॥
ಭರಿತವೆನಿಸಲೆತ್ತಿದ ಕೆಯ್ಯ
ಕರವಾಳಿಂ ದಟ್ಟಿಯಟ್ಟುತಿರ್ದಂ ಪಗೆಯಂ ॥೨೦॥

ಕಣೆ ಕಡಿಯೆ ಭಟನ ಕೈಯೆಲ
ರುಣಿಯಂ ತಟ್ಟುತ್ತು ತಲೆಯುಮುರುಳ್ದೊಡೆ ಕರ್ಚ ॥
ಲ್ಕಣೆಯಿಂತು ಕಾಲ್ ಕಾಲಿಟ್ಟ
ತ್ತಣಿವಳರಂಗಾಂಗದಲ್ಲಿ ಶೌರ್ಯಂ ಕಿರಿದೇ ॥೨೧॥

ಒಕ್ಕಾಲೆ ಪರಿದೊಡಂ ಕ
ಟ್ಟುಕ್ಕಾಳೊರ್ವನನೆಯಾದೊಡಂ ಕೊಲದಿರೆನೆಂ ॥
ದೊಕ್ಕಯ್ಯೊಳೂರಿ ಬಿಲ್ಲನ
ದೊಕ್ಕಯ್ಯಸಿಯಿಂದೆ ಪಗೆಯ ಪಾರ್ದನದೊರ್ವಂ ॥೨೨॥

ಅಶನಿಪ್ರಹಾರ ಭೀಕರ
ವಿಷಮ ಗದಾಹತಿಗೆ ಪೋಳ್ದ ತಲೆಗೊಳ್ಕೆಯ್ ಪ ॥
ತ್ತಿಸಿ ಯಮದಂಡ ಭಯಂಕರ
ವಿಷಮಾಹತಿಯಿಂದೆ ಹಗೆಯ ಹತಿಸಿದನೊರ್ವಂ ॥೨೩॥

ಒರೆವರುಣಾಂಬುವುಣ್ಮುವ ಮಿದುಳ್ ಕಡಿವೋದೊಡಲರ್ದವಾಕರುಳ್
ಮುರಿವ ಕಟಸ್ಥಳಂ ಪರಿವಕಯ್ಯರುಣೋದಕದಲ್ಲಿ ತೇಂಕುವಾ ॥
ಬಿರುಮೊನೆಗಾರರಟ್ಟಿಯುರೆತೀರುವ ಕಂಗಳ ಕಾಂಬಿನಂ ಮರುಳ್
ಮೆರೆದಡಗಂ ತಿನುತ್ತೆ ಕುಣಿಯುತ್ತಿರೆ ಬೀರಧಿನಲ್ಲಿ ಕಾದಿದರ್ ॥೨೪॥

ಗದ್ಯ॥ ಅನ್ನೆಗಮದೊಂದೆಡೆಯೊಳ್—

ಕಂದ|| ಅರಿಯುತೆ ಶರಾಳಿ-ಕರದಿಂ
ದರಿಶರಸಿಜವುಂ ಮದೋತ್ಥ-ದುಶ್ಶಾಸಗಜಂ ||
ಬರೆ ತಗದರ್ಕಿಂತಂ ರೌದ್ರೋ
ತ್ಕರ ರಂಹಂ ಸಿಂಹನಾಗಳಾಹವ ಸಿಂಹಂ ||೨೫||

ನಿನ್ನ ಬಲದ ಬೀರದ ದ
ರ್ಪೋನ್ನತಿ-ವರ್ಣನೆಯ ವಾಕ್ಯಕಿದು ವಿಶ್ರಮಣ
ಕ್ಕನ್ನಿಟ್ಟ ಚಿಹ್ನೆಯೆಂಸುತುಂ
ಮುನ್ನಸೆದಂ ತೀಕ್ಷ್ಣಶರವನೊಂದಂ ಸಿಂಹಂ ||೨೬||

ಪೆಂಪಿನ ಪೆಸರಿಂದೇಂ ನುಡಿ
ಗುಂಪಿನ ಬೀರದಿನದೇಂ ಫಲಂ ಪುಯ್ಯಲೊಳಿಂ ||
ದಾಂಪೊಡೆನೋಡೆಂದದನರಿ
ದುಂ ಪಡಿಯಲಗುಗಳನೆಚ್ಚನಾ ದುಶ್ಶಾಸಂ ||೨೭||

ನೆನೆದೆಚ್ಚೊಡೆತ್ತ ನಿನ್ನಯ
ನೆನಪೀ ಲೋಕದೊಳೆನುತ್ತುಮಾದರ್ಕೆ ದುಶ್ಶಾ ||
ಸನನಲಗುಗಳಂ ಕಡಿದಾ
ತನ ಬಿಲ್ಲಂ ತರಿಯೆ ಕಯ್ಯ ಮುರಿವಂತಾಗಲ್ ||೨೮||

ಅಸಿಗೊಂಡಾ ಸಿಂಹಂ ಮೆಯ್
ಬಿಸುಪೇರಿರೆ ಮುಳಿಸುಗೊಂಡು ದುಶ್ಶಾಸನನಂ ||
ರಸೆಗುರುಳಿಸಿ ಮುಂಬರಿದವ
ನಸಹೋದರವರ್ಗಮಾವರಿಸೆ ಗಣಿಸಿದನೇ ||೨೯||

ಬಾಣಾಹತಿಯಿಂ ಕೆಲಬರ್
ಪ್ರಾಣಂಗಳೆದವರ್ಗಳಾದರುಳಿದರ್ ಭರದಿಂ
ಕ್ಷೀಣಬಲರೋಡಿದರ್ ಮುಳೆ
ಗೋಣೆಯೊಳೋಡುವ ಪಯುಂಗಳೆನೆ ಕುರುತನುಜರ್ ||೩೦||

ಗದ್ಯ॥ ಆಗಳೊಂದೆಡೆಯೊಳ್ ಭುಜಬಲದಿಂ ಪಲಂಬರಂ ಬಲಂ
ಗೆಡಿಸಿದ ಕುರುಕುಲದ ಪಳಬನಪ್ಪ ಭೀಷ್ಮಂಗೆ ಬಲಭದ್ರಂ ಮಾರ್ಕೊಳೆ
ತಾನೆಂದಂ —

ಪಟ್ಟಕ್ಕಾಗದ ವಂಶದೊಳ್ ಜನಿಸಿದಯ್ ಮೇಣ್ ದೀವಿಯಾಳ್ದಬ್ಧಿಸಂ
ಸ್ಪೃಷ್ಟಕ್ಷ್ಮಾಪತಿಯಾದ್ಗೆಯ್ ಅನುಜನಿಂ ಮೇಲಾಣೆಯಂ ಮಾಡಿಸ ॥
ಲ್ಪಟ್ಟಂ ಶ್ರೇಷ್ಠತೆಯೆಂಬ ತಕ್ಕನುಡಿಯಂ ತಳ್ಕೈಸಿದಯ್ ನಿನ್ನವೋ
ಲುಟ್ಟರ್ ಬೆಳ್ಜಸಮೆಂಬ ಸೀರೆಯನದಾರ್ ನೀಂ ಸಂಗರಕ್ಕರ್ಹನೇ ॥೨೮॥

ಕಂದ॥ ಬಲಭದ್ರ ಕೃಷ್ಣನೊಡನೇ
ಕೆಲೊ ರಣಕ್ಕೈತಂದೆ ಪೋಗುವೋಗಲ್ಲನೊಡಾ ॥
ಬಲಿದೇವಂಗಲ್ಲದೆ ದೇ
ಗುಲ ದೇವಂಗೇಕೆ ಪೊರಗೆ ಮೆರೆವಾ ಬೆಸನಂ ॥೩೨॥

ದೇಹಬಲದಿಂದೆ ವೈರಿಯ
ನಾಹವದೊಳ್ ಗೆಲ್ವಮಾತದಂತಿರ್ಕೆ ಮಹಾ ॥
ವಾಹಿನಿಯ ಬಲದಿನಕ್ಕುಮೆ
ಓಹೋ ಬಲಭದ್ರನೆಂಬ ಪೆಸರಯಥಾರ್ಥಂ ॥೩೩॥

ಇದು ಕೈದುವೆನುತೆ ಹಲ-ಮುಸ
ಲ-ಧರಂ ತಾನಾಗಿ ಬೆಳ್ಪ ನೀನಾಂಪಯ್ ನೋ ॥
ಡಿದು ಘನಕದನಂ ತಾನು
ಳ್ವುದು ನೆಲ್ಗುಟ್ಟುವುದುಮಿಲ್ಲಿ ನೀಂ ತೋರುವುದೇ ॥೩೪॥

ಗದ್ಯ॥ ಎಂದಾ ಭೀಷ್ಮನ ಭೀಷ್ಮಮಪ್ಪ ಮೂದಲೆವಾತು
ಕೂದಲಲುಗೆ ಕೋಪಮಂ ಪೆರ್ಚಿಸೆ ಮಾಧವಾಗ್ರಜನಾಸ್ಫೋಟಿಸಿ
ಕೇಳೆಂದಿಂತೆಂದಂ —

ಕಂದ|| ಮಕ್ಕಳ್ಗಲಿವೊಡೆಯಿಂ ಬಂ
ದಿಕ್ಕಿದ ನೀಂ ಸತಿವಿಯೋಗಮಂ ತಂದೆಗೆ ಮೇಣ್ ||
ತಕ್ಕಿನ ಪಟ್ಟಕ್ಕಾಗದ
ನಕ್ಕುಂ ನಿನ್ನಂತೆ ಬಳ್ದನಾವನುಮೊಳನೇ ||೩೫||

ಬರ್ಕೆ ಮದುವೆ ನಿಂಬಾ ರಾ
ಯರ್ಕಳೆನುತ್ತಿಟ್ಟ ಪಣವ ನೀಂ ಗೆಲ್ದಾ ಪೆ ||
ಣ್ಮಕ್ಕಳನಟಮಟಮುಂ ಗೆ
ಯ್ದುರ್ಕಿಂ ಗುರುಗೆಚ್ಚ ದುಷ್ಟರಾರ್ ನಿನ್ನನ್ನರ್ ||೩೬||

ಕಿರಿಯಱ ತಿರ್ದುವಾತನೆನಿಸಿರ್ದನಿಮಿತ್ತ ವಿರೋಧವೃತ್ತಿಯಿಂ
ಮೆರೆಸುತೆ ನಾಡೆ ಪಾಂಡವರ ಬಾಧಿಸುವಾ ಕುರುಭೂಮಿಪಂಗೆ ಪಾಂ ||
ಗರಿದುರೆ ಬುದ್ಧಿವಾತೊರೆದು ತಿರ್ದದೆ ಮುದ್ದಿನೊಳಾತನಾಣೆಯಿಂ
ಮೆರೆವನೆ ದುರ್ಗುಣಕ್ಕಿರವನೀವರದಾರ್ ಸಲೆ ನಿನ್ನ ಮಾಳ್ಕೆಯಿಂ ||೩೭||

ಗದ್ಯ|| ಆಗಳ್ ಭೀಷ್ಮನಪಂ ತಡೆಯಲಾರದಾತನಂ ತಡೆದು—

ಕಂದ|| ಅಂತಲ್ಲುತ್ತು ಪುಟ್ಟ ತಂದೆಗೆ
ಸಂತಸಮುಂ ತರೆಗೆ ಶಾಂತಿಯುಪ್ಪಂತುಟು ಭೀ ||
ಷ್ಮಂ ತಾನೆನಿಸಿಕಿದೆನಿಂದಾಂ
ಸಂತೈಸಿದೆನಲ್ತೆ ನೋಡು ನೀನುಭಯತರಂ ||೩೮||

ಇರ್ಕಡೆಯುಂ ಪೊಣರುತ್ತಿರ
ಲುರ್ಕಿಂ ಕೈಬಿಟ್ಟನಗುವ ಲೀಲೆಗಿಡೆಪರಾ ||
ಗಿರ್ಕುಂ ನೀಂ ವೈರದೆ ಬರೆ
ಸೊರ್ಕಂ ತಗ್ಗಿಸದೆ ಕೆಮ್ಮನೇಂ ಬಿಟ್ಟಪೆಪೇ ||೩೯||

ಬರುವಾತೇಂ ತೊಟ್ಟು ನೋಡೊಂದುರುತರಶರನುಂ ದೇಹದೊಳ್
ಸತ್ವವೊಪ್ಪು
ತ್ತಿರೆ ನಿನ್ನಂಗಾಂಗದೊಳ್ ವೀರರಸವುಗುತೆರಲ್ ಚಿತ್ತಮುಸ್ಪಂದವೊಪ್ಪು
ತ್ತಿರೆ ಹಸ್ತೋದ್ಯೋಗ ಚಾತುರ್ಯಮದು ಮೆರೆವಿನಂ
ಚಾಪಮುಚ್ಛೇದ್ಯಮೆಂಬಂ
ತಿರೆ ಮೇಣಂತೆಲ್ಲವಿಾಗಳ್ ಮೊಗದಿರುಪು ಭರಂಗೆಯ್ಯೆನಲ್
ಭೀಷ್ಮನಾಗಳ್ ||೪೦||

ಕಂದ|| ಸುಯ್ಯೆಂದುದು ಬಯ್ಯೆಂದುದು
ಕುಯ್ಯೆಂದುದು ಬಾಣಜಲಧಿಯೊಳ್ ಮುಳುಗಿಸುತುಂ ||
ಪೊಯ್ಯೆಂದುದು ಕೊಲ್ಲೆಂದುದ
ಜಯ್ಯಮೆನಲ್ಹಾದ ಕಾದ ಬಲನಾ ಕ್ರೋಧಂ ||೪೧||

ಗದ್ಯ|| ಅಂತಾಗಿರ್ವರುಂ ತಾಗಿ ಕೂರ್ಗಣೆಗಳನಿಸೆ —

ಕಂದ|| ಶರಶರಸಂಘಟ್ಟಣೆಯಿಂ
ದುರಿಯೆಳ್ದುದು ನಾಡೆ ಪರ್ವಿತೆತ್ತಲ್ ಸುತ್ತಲ್||
ಹರಿಯುಗ್ರಜಭೀಷ್ಮರ್ ತಾ
ಮುಱಿಗೆರೆಯೊಳ್ ವಿಾವರಱತೆ ಪೊಣರುತ್ತಿರ್ದರ್ ||೪೨||

ಗದ್ಯ|| ಆಗಳೆ ಪೂರ್ಣಭರದಿಂ ವಿಕರ್ಣಂ ಬರೆ ಯಾದವವೀರ
ನಪ್ಪ ಕವಿಯೆಯ್ತಂದು ನಿಂದು ಬಾಣದಿಂದಾತನಂ ಕವಿಯಲೊಡರಿ
ಸುತಿಂತೆಂದಂ—

ಮನದಿಂ ಮತ್ಸರಮಂ ಬಿಸುಟ್ಟು ಸಮತಾಂತರ್ಭಾವದೊಳ್ ಪತ್ತನಿ
ಟ್ಟು ನವೀನಂ ಗುರುಮಾರ್ಗಯುಕ್ತಮುರು ಸಚ್ಛಾಸ್ತ್ರಾನುಗಂ
ಪೂಜ್ಯಮೆಂ||
ದೆನಿಪಾ ಸತ್ಕೃತಿಯುಂ ನೆಗಳ್ಚದೆ 'ಇತೋಭ್ರಷ್ಟಸ್ತತೋಭ್ರಷ್ಟ' ಎಂ
ದೆನಿಸಲ್ ಯುದ್ಧಕೆ ಬಂದು ಸೋಲ್ಪಡೆದಪಯ್ ನೀನಿಂ
ಕವಿಪ್ರಾಜ್ಞನೇ ||೪೩||

ಕಂದ|| ಎನಗಿದು ಮೆಚ್ಚಿನ ನಚ್ಚಿನ
ದೆನುತುಂ ಸ್ವಚ್ಛಂದವಾಗಿ ಕಾದಲ್ ಬರದಿರ್||
ಮುನಿದೆನ್ನ ಮುಂದೆ ನಿಲದಿರ್
ನಿನಗೆನ್ನಾ ಪಿರಿಯ ಬೀರರಾಣತಿಯಿರ್ಕುಂ ||೪೪||

ಗದ್ಯ|| ಎಂದು ವಿಕರ್ಣನೆಂಬುದುಂ—

ಕಂದ|| ವಾಚಾಳರ ಸಭೆಯೊಳಮಿದು
ರೋಚಕಮಿಂತೆನ್ನೊಳಾಡದಿರ್ ಮೊನೆಯಿದು ದಲ್||
ಪ್ರಾಚುರ್ಯ ಶಕ್ತಿಯಿಂದಾ
ಲೋಚಿಸಿ ತುಡು ಕಣೆಯನೆಂದು ಕಣೆಯುವನೆಚ್ಚಂ ||೪೫||

ಎಚ್ಚೊಡೆ ಖಂಡಿಸೆ ಕೋಪಂ
ಬೆರ್ಚೆ ಮಹಾಶಕ್ತಿಬಾಣದಿಂದಂ ಕವಿತಾ||
ನೆಚ್ಚು ವಿಕರ್ಣನ ಕರ್ಣಂ
ಚುರ್ಚಲ್ ತಾನಾರ್ದು ಕೆಡೆದನಂತಾ ಕ್ಷಣದೊಳ್ ||೪೬||

ಗದ್ಯ|| ಅಂತು ಕುರುಬಲಮೊಯ್ಯನೊಯ್ಯನೆ ಕುರುಬಲ
ಮಾಗುತ್ತಿರೆಯಿರೆ —

ಸುತ್ತಲ್ಯಾಕಾಶಮಾರ್ಗಂ ಕಿರಿದೆರಗಿನಿಲಲ್ ಭೂತಳಂ ಸಾಲದತ್ತಿ
ತ್ತಿತ್ತಲ್ ಮಾರೊಡ್ಡು ಗೊಡ್ಡೆಂಬಿನಮೊಡನೊಡನೊಂದರ್ಕೆ
ಮತ್ತೊಂದು ಮೇಳಂ॥
ಪತ್ತಲ್ ತಾಂ ಗುರ್ರ್ರೆ ಗುರ್ರ್ರಂ ಗುರುಗುರುಗುರುವೆಂಬಾ
ಗುರುಧ್ವಾನದಿಂದಂ
ವಿತ್ತಾಧೀಶಾಜ್ಞೆಯಿಂ ಬಂದುದಪರಿಮಿತ ಮೇಘಾಧ್ವಯಾನ-
ಪ್ರತಾನಂ ॥೪೭॥

ಗಿರಿಗಳ್ ಚಿಕ್ಕನೆ ಜಗ್ಗಿರ್ವೋಪವೊ ಮಹಾಂಭೋರಾಶಿಯಾರ್ದತ್ತೊ ದಿ
ಕ್ಕರಿಗಳ್ ಗೀಳಿಡುತಿರ್ಪುವೋ ವಿಕಟ ದೈತ್ಯಾನೀಕಮೆಳ್ಬಟ್ಟಿತುಂ॥
ಬರುತಿರ್ದಪ್ಪವೊ ನೀರದಾವಳಿಗಳುದ್ಯದ್ಧ್ವನಮಂ ಗೆಯ್ದುವೋ
ಸ್ವರಮಿಂತೇಕೆಯೆನಲ್ಕಗುರ್ವನೊಳಗೊಂಡತ್ತಾ ವಿಮಾನಸ್ವನಂ ॥೪೮॥

ಕಟ್ಟಿದ ಕಂಬಮಂ ಸೆಳೆದುವಾನೆಗಳೋಡಿದುವಾರ್ದುವ ತೇಜಿಗಳ್
ತೊಟ್ಟನೆ ಪಾಯ್ದುವಾ ಸಮರವೀರರ ಕರ್ಣದ ಕೋಟಲಂಗಳಂ॥
ಕುಟ್ಟೆ ನಿನಾದಶೂಲಮೊಡನಸ್ತ್ರಚಯಂ ಸಲೆ ಜಾರಿ ಭೂಮಿಯಂ
ತಟ್ಟಿದುದಾಕ್ಷಣಂ ನೆಲದೊಳಾರಿದನೀಕ್ಷಿಸಿದರ್ಕಳೀ ಮೊದಲ್ ॥೪೯॥

ಅಸುವಿಲ್ಲಂ ಪಕ್ಕಿಯಲ್ಲಂ ಗರಿವೊಡೆದುವದುಮಿಲ್ಲಂ ಮಹಾಭಾರಮಪ್ಪಾ
ಯಸದಿಂ ಮಾಡಿರ್ದುದೆಂತೀ ಗಗನದೆ ಚರಿಕುಂ ತಾನೆನಿಪ್ಪೊಂದು ಪೆರ್ಬ॥
ಕ್ಕಸಮುಂ ತೀವಲ್ಕೆ ಜಂತ್ರಂ ಪಿರಿದೆಲರೆಸಗಲ್ ತೇಲಲಾವೇಗದಿಂದಂ
ನುಸಗುತ್ತಿತ್ತಂ ಬರುತ್ತಿರ್ದುದನರಿದದನೇನೆಂದು ಪೇಳಲ್ಕೆ ಬರ್ಕುಂ॥೫೦॥

ಇದು ಧರ್ಮಕ್ಕೆ ವಿರುದ್ಧಮೈ ಭುಜಬಲೈಶ್ವರ್ಯಕ್ಕೆ ತಾಂ ಬಾಹಿರಂ
ಕದನಕ್ಕಾಗದು ನೀತಿಯಿಂ ವಿಮುಖಮೆಂದಾ ಧರ್ಮಪುತ್ರಂಗೆ ನೋ॥
ವ್ಪೊದಗಲ್ ಯಾದವರಲ್ಲಿ ಮುಂದರಿಯದಿರ್ದರ್ಗಳ್ ಭಯಭ್ರಾಂತಿ ಬಂ
ದಿದಿರಾದತ್ತವರ್ಗೆ*ಲ್ಲಮುಳ್ಳರರೆ ತಾಸಿಂತಾಪೊಡಾರಾದೊಡಂ ॥೫೧॥

ಕಂದ|| ಬಾಣಾಹತಿಯಿಂ ತಾನ
ಕ್ಷೂಣಂ ಕೂರಸಿಗೆ ತಾಣಮಲ್ತುದ್ಗದೆಗಂ||
ಕಾಣದು ಗುಂಡೇಟಂ ನಿ
ಸ್ತ್ರಾಣಂ ಗೆಯ್ದಿದರನೆಂತು ಮಾಣಿಪುದೀಗಳ್ ||೫೨||

ಉರಿಗುಂಡಂ ಕಲ್ಲುಗುಂಡಂ ಬಿರುಗಣೆಗಳ ಗುಂಡಂ ಕರಂ ಪಾಯ್ಸುತೆತ್ತಂ
ಛುರಿಕಾಜಾಲಂಗಳಂ ನೆಟ್ಟನೆ ನಭದೆಡೆಯಿಂ ಬೀೞಸುತ್ತಿರ್ಪಿನಂ ಪಾ||
ಯ್ವುರು ಶೂಲಾನೀಕದಿಂ ಯಾದವಶಿರವರೆಯಾಗುತ್ತಿರಲ್
ಪೋಯ್ತುಪೋಯ್ತೆಂ
ದೊರೆವಾಶಾನಾಶವಾದಂ ಪರಿದು ರವಿಸಿತಾ ಯಾದವಾಂಭೋ
ನಿಧಾನಂ ||೫೩||

ಕಂದ|| ನಿಸೆವಗೆಯುನ ತೋಱಿತು ಕದಿ
ರೆಸಕಮಿದೆನೆ ಬೀೞುತಿರ್ದ ಕುಂತಾನೀಕಂ||
ಪುಸಿಯಾಗದೆ ನೆತ್ತಿಯ ಗುಱಿ
ಪೊಸತೆಱದಿಂ ವೈರಿವಧೆಯನೆಸಗಿತ್ತ ಕಟಾ ||೫೪||

ಮುನ್ನಿಲ್ಲದೊಂದು ಜುದ್ದದ
ಪನ್ನಣದಿಂ ಪಡೆಗಳೆಯ್ದೆ ಪಡಲಿಡುವಂತೆ||
ಪರ್ಣ್ಣೈಗಮಾಱಿದನುರುಳಿಪ
ಬಿನ್ನಣಿಗರ್ ಎಂಬ ನುಡಿಯೆ ನುಡಿ ಯದುಬಲದೊಳ್ ||೫೫||

ಗದ್ಯ|| ಆಗಳಿದಯುಃ ಫಳಕದಿಂ ಸಮೆದುದರಿಂದಯಸ್ಕಾಂತೋಪಲಂಗಳಿನೆಚ್ಚು ರುಳಿಸಲಕ್ಕುಮೆಂದು ಬಿನ್ನಣಿಗರೂಹಿಸುತ್ತುಮಿರೆ ಸೇನಾನಾಯಕನುಂ ಧೈರ್ಯದಾಯಕನುಮಪ್ಪ ಸಾತ್ಯಕಿ ಮುಂದೆ ಬಂದಿಂತೆಂದಂ—

ಮಾತೇಂ ಭೀತಿಯದೇಕೆ ಚಂಚಲತೆಯೇಕಾಶಂಕೆಯಿಲ್ಲೇಕೆ ಧೈ
ರ್ಯಾತೀತರ್ಗಿದು ಶೌರ್ಯದೊಂದು ನಿಕಷಂ ಬನ್ನಿಂ —
ಮಹಾಗ್ನ್ಯಸ್ತ್ರ ಸು ॥
ವ್ರಾತೋಗ್ರಾಹತಿಯಿಂ ವಿಮಾನತತಿಯುಂ ಮಣ್ಗೂಡುಗುಂ ಖೇಚರ
ವ್ರಾತಂ ಮಿತ್ತುವನಪ್ಪುಗುಂ ಪೊಣರಿಮೆಂದಾರಲ್ಕದೇನೆಂದಪೆಂ ॥೨೬॥

ಗದ್ಯ॥ ಅಂತು ಧೈರ್ಯ ಶೌರ್ಯಂಗಳಿಂ ದಿವ್ಯ ಮಂತ್ರಬಾಣ ಪ್ರಯೋಗಂಗಳಿಂ ಪೊಣವ್ವ*ದುಂ ವಿಮಾನಂಗಳೆಲ್ಲಂ ಸುರಪನ ವಜ್ರ ಹತಿಯಿಂದೆರಂಕೆಗಡಿದುರುಳ್ವ ಬೆಟ್ಟುಗಳಂತಿರೆ ತಿರೆಗುರುಳ್ವ ಕಷ್ಟಮಂ ನಷ್ಟಮುಂ ಸಹಿಸಲಾರದಾ ಖೇಚರರ್ ಭೂಚರರುಂ ವಂದನಾಚಾರರುಂ ನಿಬದ್ಧ ಸಂಚಾರರುಮಾಗಿ ನಿಂದಾಗಳ್—

ಬಾಂದೇರ್ ಭೂತಲಮುಗ್ನಮಪ್ಪಿನಮಶೇಷಂ ಯುದ್ಧಸೇನಾಳಿಯುಂ
ಬಂದಾ ಬೀಡೊಳೆ ಮಗ್ನಮಾಗಿಯಿರೆ ಕೃಷ್ಣಂ ಖೇಚರಚ್ಛೇದಸಂ
ಬಂಧಂ ಮುಗ್ನನಿರಲ್ ನರಂ ನುಡಿದುದಂ ಮಾಡಲ್ಕೆ ಸಂಮುಗ್ನನ
ಸ್ಪಂದಂ ತಾನಿರೆ ಸಿಂಧುಮುಗ್ನನಿನನಾದಂ ಚಾರುಸಂಧ್ಯಾರುಣಂ ॥೨೭॥

ಎಂಬಲ್ಲಿಗೆ ಸತ್ಯಾಲೋಕನ ಕಾವ್ಯದೊಳ್

ಯು ದ್ಧ ವ ರ್ಣ ನ ಂ

ಷಷ್ಠಾಶ್ವಾಸಂ



# ಶ್ರೀ ಕೃಷ್ಣ ಪ್ರತಿಜ್ಞಾ ಪಾಲನಂ

## ಸಪ್ತಮಾಶ್ವಾಸಂ

ಕಂದ॥ ಶ್ರೀಜಯವನಿತಾವಲ್ಲಭ
ನಾ ಜಿಷ್ಣುವೊ ವಿಷ್ಣುವೋ ಉಭಯರೋ ಮೊದಲಾ ॥
ರಾಜಿಯೊಳಿದನರಿಯಲ್ಕೆ
ಲ್ಲಾ ಜನರಾಶಾಮನಸ್ಕರಾಗಿರ್ಪಿನೆಗಂ ॥೧॥

ಗದ್ಯ॥ ಅಂತಿರುಳ ವಿಶ್ರಮದಿಂ ಪಗಲ ಮೊನೆಯ ಪರಿಶ್ರಮಮುಂ—ಉಚಿತೌಷಧೋಪಚಾರದಿಂ ನೊಂದ ನೋವುಂ—ದಳಪತಿಗಳುತ್ಸಾಹದಿಂ ಪಿಂದಿನ ದಿನದ ಪರಾಭವದ ಮನಸ್ಸಂಕೋಚಮುಂ ಮಸುಳುತ್ತಿರೆಯಿರೆ—

ಕಂದ॥ ಒರ್ವನುದಾತ್ತಗುಣಂ ಮ
ತ್ತೊರ್ವಂ ಸತ್ವಾತಿಶಯನೆ ಬಾಂಧವರಿರ್ವರ್ ॥
ಉರ್ವಿಯೊಳೀ ರಣಮುಂ ನಾ
ನೊರ್ವಂ ಬಿಡೆನೆಂದು ರಾಗದಿಂ ರವಿಯೆಸೆದಂ ॥೨॥

ಗದ್ಯ॥ ಆ ಸೂರ್ಯೋದಯಕಾಲಮೆ ಸಮರವೀರರ ಶೌರ್ಯೋದಯ ಕಾಲಮಾಗೆ ಪಾಂಡವ ಕೌರವರ್ ಯಾದವರೊಳ್ ಕಾದುತ್ತಿರಲಿತ್ತಲ್ ಸುದರ್ಶನಪಾಣಿ ವೈರ್ಯಂಗಮುಂ ಭೇದಿಪ ಶಾರ್ಙ್ಗಚಾಪಮನೆತ್ತಿ ಖೇಚರನನರಸಲ್ ಬಗೆದು —

ಕಂದ॥ ಇಂ ಕೆಮ್ಮನಿರೆಂ ನುಡಿಯಂ
ನಾಂ ಕಾವೆಂ ನುಡಿಗನುಭ ,ಚರನಸುವಿಂಗಂ ॥
ತಾಂ ಕಡೆಯ ದಿವಸಮಿನ್ನೆಡ
ರೇಂ ಕತ್ತಲೆ ದಿನಪನಿದಿರೊಳೇನಿರ್ದಪುದೇ ॥೩॥

ಗದ್ಯ॥ ಎಂದು ತನ್ನೊಳೆಂದುಕೊಂಡಾಗಳ್ ಮುಳಿಸಿನುರಿ ಯುರಿಯೆ—

ಬಲದಿಂದುರ್ಕಿಂದೆ ಲೋಕಂ ಬೆದವಿ*ನವೂರು
ವೇಗಾಟದಶ್ವಾನುರೋಹಾ
ವಿಲನೇ ತ್ವತ್ಕಾರ್ಯಸಿದ್ಧಿಪ್ರದನೆನಿಸುವೆನೆಂತಂದು ಪೂಣ್ದಂತೆ ಗೆಯ್ವೆಂ ॥
ನೆಲಸಲ್ ನೀನೆಲ್ಲಿಯುಂ ನಾಂ ಬಿಡೆ ಬಿಡೆನೆಲೆ ಬಾ ಬಾರಿದಲ್ತೀಗ ನಿನ್ನಂ
ನಲವಿಂ ಕಾವಾತನೇ ಬರ್ಕತಿಭರದಿನದಲ್ತಾನೆ ಬಂದಪ್ಪೆನೀಗಳ್ ॥೪॥

ಕಂದ॥ ಆರಲ್ಲಿರೆಯುಂ ಕೊಲ್ವಾ
ಸೂರುಳನಿಟ್ಟಂತರಿಂದೆ ನೀನಡಗಿದೊಡೇಂ ॥
ಘೋರನೆ ಸೂಜಿಯನಾನಿಂ
ದೋರಂತಿರೆ ಲೋಹಕಾಂತನೆಳೆವಂತೆಳೆವೆಂ ॥೫॥

ಮೂಡಿದ ಪೊಳ್ತಿದು ಪಡು ಮುಳು
ಗಾಡದ ಮುನ್ನಮೆ ಕೊಲಲ್ಕೆ ನಾಂ ಪೂಣ್ದುದರಿಂ ॥
ದೋಡದೆ ಕಾಡದೆಯಾರಂ
ಕೂಡದೆಯೆನ್ನೆಡೆಗೆ ಬರ್ಪುದೊಪ್ಪುಗುಮಲ್ತೇ ॥೬॥

ಆದೊಡೆ ನಿನಗಿದು ಸಾಜಂ
ಕಾದಲ್ ತಾಂ ಬರ್ಕೆ ನಿನ್ನೆ ಕಾವಾತಂ ಮಾ
ತಾರಿಸದೊಡೀಗಳ್ ಬಿಸು
ಪೂದಿಗಳಪ್ಪಿರ್ ಮನೋರುಸತ್ವಾನಲನಿಂ ॥೭॥

ಗಣನೆಸಲುತ್ಸಾಹಂ ಕುಣಿ
ಕುಣಿವಾ ತೋಳ್ಗಳನೆ ಪಡೆದ ವೀರಾಗ್ರಣಿಯಾ ॥
ಗಣನೆಗೆ ಬಂದ ನರಂ ಪೆ
ಣ್ಣಣಿಕೆಗೆ ಬಂದಿಂತು ಕಾಣದುದು ಬೆರಗಲ್ತೇ ॥೮॥

ಖಗರಾಜಂ ಕೊಳ್ಳೆಗೆಯ್ವನ್ನೆಗಮುಳಿಗುಮೆ ತಾನೋಡಿದಾ ಪಕ್ಕಿ ಕಾಡೊಳ್
ಮೃಗರಾಜಂ ತುತ್ತಲಿರ್ಪನ್ನೆಗಮುಳಿಗುಮೆ ಪಾಯ್ದಾ ಮಿಗಂ ಸಿಲ್ಕದೇನೈ
ಖಗನೇ ಮೂಲೋಕಮಾಳ್ವೀ ಹರಿಗೆ ಬೆದರಿ ಪೊಕ್ಕೆಲ್ಲಿ ನೀನಿರ್ದೊಡಂ ನಿ
ನ್ನಗಳಚ್ಚೇದ ಪ್ರತಿಜ್ಞಾವನಮೆಸಗದೆ ನಾಂ ಕೆಮ್ಮನಿರ್ದಪ್ಪುದುಂಟೇ ॥೯॥

ವಿಜಯನಜೇಯನೆನ್ನ ಬಲದಿಂದದನೇನರಿವೈ ಧನಂಜಯಂ
ಗೆ ಜಯಮೆ ನಿನ್ನ ರಕ್ಷಕನಿರಲ್ ನುಡಿದಂತೆಯೆ ನಿನ್ನ ಕೊಂದಪೆಂ ॥
ವಿಜಯನನೆಚ್ಚೊಡಾಕ್ಷಣದೆ ಹೋಮದ ಕಾಯೊಡನೆಣ್ಣೆ ಪೊತ್ತುವಂ
ತಜಗಿಜಯಾಗಿ ತಾಗಿದೊಡನಾ ಪದದೊಳ್ ನಿನಗೆಕ್ಕು ಪೋಗುಗುಂ ॥೧೦॥

ಗದ್ಯ॥ ಎಂದುತ್ಕ್ಷೇಪದಿಂ ನುಡಿದಾರ್ದ—

ಪೊರಮಟ್ಟತ್ತು ಬೆರಲ್ಗಳಿಂ ದಿಗಧಿಪರ್ ಕರ್ಣಂಗಳಂ ಮುಚ್ಚೆ ಮೆ
ಯ್ಮರೆವನ್ನಂ ಶತವಾರಿದಧ್ವನಿಯುದೊಂದಾಗಿರ್ಪಿನಂ ಪತ್ತು ಸಾ ॥
ಸಿರ ಪಾಲಂಬು ನಿಧಾನ ಘೋಷಮೆನಲೂದಲ್ ಶಾಂರ್ಙಚಕ್ರಾಯುಧಂ
ಸುರಲೋಕಂ ಪೊರದಿಂದೆ ಬೇಗಿದವೊಲಾಗಲ್ ಪಾಂಚಜನ್ಯಸ್ವನಂ ॥೧೧॥

ಅದು ಪಿಂಡಿತ್ತೊ ಕೊಡಂಕೆಯಂ ಸಬಳದಿಂ ಕುತ್ತಿತ್ತೊ ಕಾಲೆತ್ತಿ ಮೆ
ಯ್ಯೊಗ್ಗದೆದತ್ತೋ ನಿಡುದಾಣೆಯಿಂ ಪೊಡೆದುದೋ ಶಾಂತಾತ್ಮಹೃತ್ತಂ
ಕಲಂ ||
ಕಿಡುದೋ ಪೇಳೆನಲೂದೆ ಬೂದಿಮುಸುಕಂ ಕಿಚ್ಚಲ್ಲಿ ಮೇಲೇಳ್ವ ಕಿ
ರ್ಚಿದೆನಲ್ ಕೋಪಮದೇಳೆ ಪಾರ್ಥನೊಡನೆಳ್ದಂ
ಕೇಳ್ದುತದ್ರಾವಮಂ ||೧೨||

ಇನ್ನೇನೊಟ್ಟಜೆಗಿರ್ಚನಳ್ಬುವನೆ ತಿಂಗಳ್ಬಂಜಮಂ ಕರ್ಪುನೀ
ರಿನ್ನೇಂ ಮಾಯಿಪನೇ ದಲಿಂದುವರೆಗಂ ಗಂಡೆಂದು ಮಾರಾಣನದೇಂ ||
ಕೆನ್ನಂ ಪೆಣ್ಣಿದೆನಿಪ್ಪನೇನರಿತಗುರ್ವಂ ಚೀರುವಾ ಜುದ್ದಧಾ
ರ್ಪನ್ನೇಂ ತೋರದೆ ಮಾಣ್ಬನೇನಿರಿಯದೇಂ ಪಾರ್ಥಂ
ಬೆಮುತ್ತಿರ್ಪನೇ ||೧೩||

ಕಂದ|| ಗಯನೆಲ್ಲಿದನರಿಯಂ ಸೇ
ನೆಯುನರಿಯಂ ಸೋದರರ್ಕಳೆಲ್ಲಿದರರಿಯಂ ||
ಭಯುಮರಿಯಂ ನಿಜರಿಪುವಂ
ಸ್ವಯುಮರಿವಂ ಕ್ರೋಧನಿಮಿತ್ತುಜನಿತುದ್ವೇಗಂ ||೧೪||

ಗದ್ಯ|| ಅಂತು ಭೋಂಕನೆಳ್ದು ಶರಶರಾಸನಂಗಳಂ ಕಯ್ಕೊಂಡು
ಮುಂಕೊಂಡಿದಿರಾಗೆ—

ನೀತಂ ಪೃಥೆಯಾತ್ಮಜಂ ನಿಜಸಹೋದರ್ಯಾತ್ಮನಾಥಂ ವಲಂ
ಹರಿಯಾತಂ ವಸುದೇವಜಂ ನಿಜಸತೀಭ್ರಾತಂ ದಲೆಂಬಾ ಪರ ||
ಸ್ಪರಭಾವಂ ಮರೆಯಾಯ್ತೆನಲ್ ಕಡುಕಸಲ್ದೋರೋರ್ವರಂ ತನುತ್ತಿ
ರ್ಪರುವಾಯ್ದೀಕ್ಷಿಸುತೆಚ್ಚರಸ್ತ್ರಚಯುಮಂ ದಿಗ್ದಂತಿಗಳ್
ಪಾವಿರ್ಪನಂ ||೧೫||

ಇದು ತಾಂ ಭಾರ್ಗವ-ಭೀಷ್ಮಯುದ್ಧಮೊ ಮೊದಲ್ ಪಾರ್ಥಂಗೆ [illegible]
[illegible] ಮಾದೇವನ
ಳ್ಳೊದಗಿದಾಹವಮೋ ಎನಲ್ಕತಿಶಯಮುಂ ಸಂದೇಹಮುಂ ಪುಟ್ಟಿಸಿ||
ತ್ತಿದು ತಾನಲ್ತದಱಿಂದೆರಳ್ಕಡಿಯೆನಲ್ ಕೋಲಾಹಲಂ ತೋರ್ದುದಾ
ಕದನಾಗ್ರೇಸರ ಕೃಷ್ಣ-ಪಾರ್ಥರುರುಯುದ್ಧಂ ಶಕ್ತಿಬದ್ಧಂ ವಲಂ ||೧೬||

ತಾಱಿತ್ತಾಗಸಮೆನೆ ದೆಸೆ
ತೂಱಿತ್ತೆನೆ ಗಾಳಿ ಪೆತ್ತುದೆನೆ ಭೂವಲಯಂ||
ಕಾಱಿತ್ತೆನಲಸ್ತ್ರಚಯಂ
ಪೇಱಿತ್ತೆತ್ತೆತ್ತಲುಂ ರಣಾಂಗಣದೆಡೆಯೊಳ್ ||೧೭||

ಹರಿಯೇಂ ಗೆಲ್ವನೊ ನರನೇಂ
ವರಿಸುವನೋ ವಿಜಯಲಕ್ಷ್ಮಿಯಂ ನೋಳ್ಪೆಮೆನು||
ತ್ತಿರೆ ನಭದೊಳ್ ಖೇಚರಿಯರ್
ಸರಲಮುಸುಂಕವರ್ಗೆ* ಮಱೆಯನೆಸಗಿತ್ತಾಗಳ್ ||೧೮||

ಒಂದರ್ಕೊಂದೆರಡರ್ಕೆರ
ಡೆಂದೆನೆ ಸರಲೆಚ್ಚು ಪಿರಿದು ಪೊಣರುತ್ತಿರಲ್||
ಸ್ಪಂದಸ್ಥಿತಿಯಿಂ ಜಯವಧು
ನಿಂದಿರೆ ವಾಗ್ಯುದ್ಧಮವರೊಳಾದತ್ತಾಗಳ್ ||೧೯||

ಐವರುಮಿರೆ ನಿನ್ನಂ ಪಿರಿ
ದೋವಿದೆನತಿ ಹಿತವನೆಸಗಿ ಕಾಯ್ದೆಂ ಬಿಸುಟಾ||
ಭಾವವನೀಗಳ್ ಕಿನಿಸಿಂ
ಭಾವನೊಳೆನ್ನಲ್ಲಿ ಪೊಣರವಂದುದೆ ಮಱುಳೇ ||೨೦||

ಎನ್ನತ್ತೆಮಗನೆ ನಿನಗಾ
ನೆನ್ನಣುಗಿಯನಣ್ಣ ನೆನ್ನವಜ್ಞೆಯ ನೆಸಗಿ
ರ್ಪನ್ನಮದನಲಕ್ಷಿಸಿಯಿ
ತ್ತೆನ್ನೊಳ್ ನೀನಾನಲಕ್ಷ್ಯಮೇ ತಿಳಿಯದಪೋಲ್ ||೨೧||

ಜೂದಿನ ಸಭೆಯೊಳ್ ಮಾನವ
ನಾ ದುರುಪದಿಗುಳಿಸಿದಾತನಾರತಿಥಿಗಳಂ ||
ಆದರಿಪೆಡೆಯೊಳ್ ಬನದೊಳ್
ಮೋದದಿನಾರೆತ್ತಿ ನಿಮ್ಮ ದಮ್ಮಂ ಬಿಡಿದರ್ ||೨೨||

ಅದರಿಂ ಬಿಡು ಗಯನಂ ಪೂ
ಣ್ದಿದಸೀಗಳ್ ನಡೆಯಿಪೆಂ ದಲಿಂದುವರಂ ಸ್ನೇ ||
ಹದ ಭಾವಂ ಕುಂದದೆ ಕುಂ
ದೊದಗದವೋಲ್ ನಿನ್ನದಲ್ತೆ ಮಾಡುವ ಕಜ್ಜಂ ||೨೩||

ಗದ್ಯ|| ಎಂಬನಿತರೊಳರ್ಜುನಂ ತಡೆದು—

ನಾಲಗೆಯುಂಟೆನೆ ಜರುಚುವ
ಕಾಲಮಿದೇಂ ಕ್ಷತ್ರಿಯತ್ವಮುಂ ರಕ್ಷಿಪೊಡಾ||
ನಾಲಗೆ ನುಡಿದುದನೆಸಪುದು
ಕಾಲಂ ಪಿಡಿದವನನೋವುದುಂ ಪಿರಿದಲ್ತೇ ||೨೪||

ಬಂಧುತ್ವಮುದನ್ಯೋನ್ಯಂ
ಬಂದಾಗಯನಂ ಸಮಂತು ಪೊರೆವುದೆ ಧರ್ಮಂ||
ಸಂದೆಯಮೇನನಗದಿರೊಳ್
ನಿಂದೊಡೆ ತಾನಾವೆಯತಾದೊಡಂ ಕಾದದಿರೆಂ ||೨೫||

ಗದ್ಯ|| ಆಗಳ್ ತಪ್ಪಿದೊಡೆ ತನ್ನ ಪ್ರತಿಜ್ಞಾಪಾಲನ ದಿನ ಮವ ಸಾನಂಗೊಳುತಿರ್ಪುದೆಂದುಂ–ದಕ್ಷತೆಯ ಕಾಳಗಮಲ್ಲದೆ ಗೆಲವು ಬಗೆ ವರಿಯದೆಂದು ನಿರ್ಣಯಕ್ಕೆ ಬಂದು ತನ್ನ ಪ್ರತಿಜ್ಞಾಕ್ಷರಮೆಂಬ ರನ್ನ ಗಂಟೆಯುಂ ವಿಜಯಲಕ್ಷ್ಮೀ ಶಿರೋಧರಕ್ಕೆ ತೊಡಿಸಿ ಪದೆದಾಲಿಂಗಿ ಸಲ್ ಬಗೆದಾ ಶ್ರೀಕೃಷ್ಣಂಗೆ ಗಳ್ಕನೆ ಮುನಿಸು ಮೂಡುವುದುಂ-

ಪ್ರಳಯ ತ್ರಿಪುರಾಂತಕನಂತೆ ಮಾಮುಸಕಂ ಮುಸಗಿ ರಿಪುನಿಪಾತಿನಿ
ಯೆಂಬ ಮಹಾಸ್ತ್ರಮಂ ಶಾಂರ್ಗಚಾಪ ಮೌರ್ವಿಗೆ ಸಂಧಿಸೆ —

ತಿರೆಯುಲ್ಲಾಡಿತು ಕುಲಗಿರಿ
ಯುರುಳ್ದ*ದರಿಲ್ ಬಿಳ್ದದೆಂಟು ದೆಸೆ ಬಾಯ್ವಿಡುಗುಂ ||
ಸುರರಾರ್ದರ್ ಮೆಯ್ವೆಮರ್ದ*ಡು
ಮರುತಂಗಳ್ಕತುರ್ದೆನಲಗುರ್ವೇರ್ಗಂ ಪಿರಿದೋ ||೨೬||

ಎಡಗಾಲನಿಟ್ಟು ಮುಂದ
ಕ್ಕೆಡಗಯ್ಯಂ ಮುಂದೆ ಸಾರ್ಚಿ ಗುಣಮಂ ಸೆಳೆದಾ ||
ಕಡೆಗಡಸಿ ಪಿಡಿದು ಕಣೆಯುಂ
ನಿಡುನೋಟವನಿಟ್ಟು ಗುರಿಯನಿಟ್ಟಂ ಕೃಷ್ಣಂ ||೨೭||

ಇದು ಪುಸಿಯಾಗದಿಂತಿದರಿಯಂ ಸಲೆಪೊಯ್ಯದೆ ಮಾಣದೆಂತು ಮಿಂ
ದಿದು ರಿಪುಬಾಣಮಂ ಬಗೆಯದೆಂದು ಮನಸ್ತನುಶಕ್ತಿಯುಕ್ತಿಯುಂ ||
ಪುದುಗೊಳಿಸುತ್ತುಮುಗ್ರತೆಯುದೇರಿರೆ ಕಾಯ್ಪುರೆ ಮಾರೆ ತನ್ನದ
ರ್ಪದ ವಿಷಮಾಸ್ತ್ರಮಂ ವಿಜಯನಾ ತನುಗೆಚ್ಚೊಡೆ
ಪೇಳ್ವುದೇನನಾಂ ||೨೮||

ಎಚ್ಚಲಗಡು ಕಾರುತೆ ಕಡು
ಗಿಚ್ಚಂ ಸರನೆಚ್ಚ ಕಣೆಗೆ ತಾಗುತ್ತೆತ್ತಂ
ಕಚ್ಚಳುರೆ ಸುಟ್ಟು ನರನಂ
ಚುಚ್ಚಲ್ ಭೋರೆರಿದು ಕುಸಿದು ಮುಚ್ಚಿಗೆ ಸಂದಂ ||೨೯||

ಕುವರಂ ಬೀಳೆ ಸುರೇಂದ್ರಂ
ಪವಿಗೊಳೆ ಭೀಮಂ ಗದಾಗ್ರಮಂ ಕೊಳೆ ನಕುಲರ್ ||
ಜವದಿಂ ದಾನಲ್ ಬರಲಾ
ಬುವಿಯಿಂ ನರನೇಳ್ದ ಮೊದಲ ಕತೆಯೇನೆಂಬೆಂ ||೩೦||

ಪಾರುತುಮಾಗಲೆ ಕೃಷ್ಣಂ
ಪಾರುಂಬಳೆಯಿಟ್ಟೊಡಾಕ್ಷಣಂ ಕಿರುಮುರಿಯುಂ||
ಪಾರಿವಮುರುಳ್ದೊ*ಡನುರುಳ್ವ*ನೊ
ಕಾರಯಿಕೆಗಳಿಂದೆಯುರುಳ್ದುದಾ ಗಯನ ಶಿರಂ ||೩೧||

ಇದುತಾಂ ಮುಂ ಸೂರುಳಿಟ್ಟಾ ನುಡಿಯು ಕಡೆಮಗಲ್ ನೋಡದೋ ಸೂರ್ಯಸಿನ್ನೇ
ನಿದರಿಂದಾದಪ್ಪುದಂ ನೋಡಡೆ ಪಡುವೆನೆ ಎಂದೊಯ್ಯ ನೆಯ್ದುತ್ತಲಿರ್ಪಂ ||
ಇದೆಕಜ್ಜಂ ದಿಟಮೊಳ್ಳಿಸಂಗುಡುಗು ಮತ್ತ್ಯಾನ್ನತ್ಯಮಂ ತರ್ಕಿಸ ಮಂ
ದುದು ಸಂದತ್ತೆಂದು ನಿಂದಂ ಮುದದುದಯದಿಸಾನಂದಕಂದಾ ಮುಕುಂದಂ ||೩೨||

ಎಂಬಲ್ಲಿಗೆ ಸತ್ವಲೋಕನ ಕಾವ್ಯದೊಳ್

ಪ್ರ ತಿ ಜ್ಞಾ ಪಾ ಲ ನ ಂ

ಸಪ್ತಮಾಶ್ವಾಸಂ

* * * * * * *

# ಪಾರ್ಥಪ್ರತಿಜ್ಞಾರಕ್ಷಣಂ

## ಅಷ್ಟಮಾಶ್ವಾಸಂ

ಶ್ರೀರಮಣಂ ರಿಪುವಿಜಯಿ ರ
ಮಾರಮಣಂ ಸತ್ಯವಾಕ್ಯನಪಗತ ಕೋಪಾ
ಕಾರಂ ಪರಿವರ್ತಿತ ಕರು
ಣಾರ ಸನಾಗುತ್ತಿರಲ್ಕೆ ಯದುಕುಲದರಸಂ ॥೧॥

ಗದ್ಯ॥ ಮತ್ತಮಾಗಳಲ್ಲಿರ್ದ ತನ್ನ ಸೋದರಮರ್ಗಂತಾಗಿ
ಮಾಳ್ಪುಚಿಕಿತ್ಸೋಪಚಾರ ಚಿಕಿತ್ಸೆಗಳಿಂದೊಯ್ಯನೊಯ್ಯನಾ ಸನ್ಮೆ
ಸಾಳ ಮರುಚ್ಛಣದೊಳೆಳ್ದುರುತ್ತಿರೆಯುರೆ–ತನ್ನ ವಿಕಟ ಪಟುತೆಯು
ನಾ ಪಟುವ ಮನಕ್ಕೆ ನಾಂಟಿಸಿದನೆನಾತನುದ್ರಿಕ್ತನಾಗಿ ಮತ್ತಂ
ಕಾದುವೊಡೆ ಕಾದುಗಲ್ಲದೊಡೆ ಬಾಗುಗೆಂದು ಬಗೆದಾ ಮುರಾಂತಕ
ನಿಂತೆಂದಂ—

ಕಲಿಮಾತು ನುಡಿದ ಮೆಯ್ಗಲಿ
ಕಲಿಗಾಳೆಗದಲ್ಲಿ ಸೋಲ್ತು ಬೆಳ್ಪಂ ನಿನ್ನಾ ॥
ಬಲಮುದಟು ಚಲಂಗಳ್ ಪ
ಜ್ಞಲಿಪ್ಪೋಲಿಳೆಗುರುಳ್ದು ನಿನ್ನುಮೇನಾಟಿಸುವಯ್ ॥೨॥

ಅಳಿಪಡೆ ಮುದ್ದಲ್ಲಂ ಮೇಣ್
ಮುಳಿಪಡೆ ಮುದ್ದಿಲ್ಲಮಲ್ಲದಿದೊರ್ಡೆ ಗಯನಂ ॥
ಉಳಿವುದುಮೆನ್ನೊಳ್ ವೈರವ
ನುಳಿವುದು ನಿನ್ನೊಳ್ಗೆ ಗೊಳ್ಳಿತಂ ನಾಗರಮೇ ॥೩॥

ಧನಮಿಲ್ಲದ ತನಗೊಂದರ
ಮನೆಯಿಲ್ಲದ ರಾಜ್ಯಮಿಲ್ಲದೊಪ್ಪುವ ಸೇನಾ||
ಜನಮಿಲ್ಲದ ನರನೆನ್ನೊಳ್
ಮೊನೆಯಂ ತಾನೆಸಗಲಕ್ಕುಮೇ ಅತಿಬಲನೊಳ್ ||೪||

ಎಲ್ಲಿವೆ ಶರಂ ಶರಾಸನ
ಮೆಲ್ಲಿವೆ ಬಲಮುರ್ಕು ನಿನ್ನ ಪೂರುಳ ಬಲ್ಪಿ||
ನ್ನೆಲ್ಲಿವೆ ಗರುವಿಕೆ ಬೀರತೆ
ಯೆಲ್ಲಿದೆ ಮೊನೆ ಗಯನನಾನುರುಳ್ಚಿದ ಬಳಿಕಂ ||೫||

ಇನ್ನೇತಕೊರಗಿ ನಿದ್ದೆಯ
ಕನ್ನೆಯ ತಳ್ಕೈಸಿ ಮರೆವೆ ಗಯನಂ ಕೊಂದ||
ತ್ಯುನ್ನತ ಮುದದಿಂದಾನಿರೆ
ಯೆನ್ನೊಡನಾನಂದಿಸುವುದೆ ನಿನಗತ್ಯುಚಿತಂ ||೬||

ನಿನ್ನನುಚಿತ ವೈರಮುಮಂ
ನಿನ್ನವಿವೇಕತೆಯ ಪೊಣರ್ದ* ತಪ್ಪಂ ಮರೆವೆಂ ||
ಇನ್ನೆಂದುಂ ನಾನೊಂದೆಂ
ಬನ್ನಂ ನಾಮಿರ್ಪಮೆನ್ನದಿದು ಹಿತವಚನಂ ||೭||

ಲೋಕಕ್ಕೆ ಶಾಂತಿಯುಂ ತರ
ಲೇಕತ್ವಂ ಪೊಂದವೇಳ್ಕುಮಿನ್ನೆವರಂ ಗೆ||
ಯ್ದಾ ಕಾಳಗಮಿದು ಸಾಲ್ಗುಂ
ಲೋಕಂ ಕಯ್ವೆಟ್ಟ ನಗದೆ ಕಾದಿದೊಡಾವಂ ||೮||

ಗದ್ಯ|| ಅಂತು ನುಡಿದಾ ನುಡಿ ನರಂಗರೆಯೆಳ್ಚರಂಬ ಸರೋಜವಿಕಸನಕ್ಕೆ ನೇಸರ ಬಿಸುಗದಿರ್ ತಾಗಿದಂತೆಯುಂ–ವಿಜಯನಂತಿನುವಿಜಯಔರ್ವಾನಲಕ್ಕೆ ನೆಯ್ವೊಯ್ದಂತೆಯುಂ — ಪಾರ್ಥನ

ಶಾಯೋರ್ದ್ರೇಕದಂಗಾರದ ವಿಭೂತಿಗೆ ವಾತಾಹತಿಯಾದಂತೆಯುಂ - ಧನಂಜಯನ ಮುಳಿಸುಗಿಚ್ಚಿಂಗೆ ಪತ್ತಿಯ ಬಣಂಬೆಯುಂ ಪತ್ತಿಸಿದಂತೆಯುಮಾಗಿ ತಾಗುವುದುಮಾತಂ ಜಡಪುಡನೆಳ್ದು—

ರಕ್ತಸರಿತ್ತಿನೊಳೀಗಳ್
ಶಕ್ತಿಯೊಳೀಸುತ್ತೆ ಕಾದವಂದಂ ಹರಿಯೊಳ್ ||
ಪಾರ್ಥನೆನಲ್ಕಾಕ್ಷಣದೊಳ್
ರಕ್ತಾರ್ದ್ರಶರೀರಿ ಕೋಪರಕ್ತಾಪಾಂಗಂ ||೯||

ಎದ್ದಾ ವೇಗಮುಮಂ ಪ್ರಕೋಪದುರಿಯುಂ ಸ್ಥೈರ್ಯಮುಂ ಕ್ರೌರ್ಯಮುಂ
ಬದ್ಧದ್ವೇಷದ ದಿಜ್ಞ್ವಮೂರ್ಧತೆಯ ರೌದ್ರಾಕಾರಮುಂ ಬೀರಮುಂ ||
ವಿದ್ಯುದ್ಧೀರ ಸಮಾವಲೋಕನದ ಗಂಭೀರತ್ವಮುಂ ಸತ್ವಮುಂ
ದುದ್ದೀಪ್ತಂಗೊಳೆ ಭೀಕರಾಕೃತಿಯ ನಿನ್ನೇಪೇಳ್ವಪಂ ಪೇಳ್ವಪಂ ||೧೦||

ಕುಳಶೈಲಂಗಳನೆತ್ತಿ ಕೀಳ್ವನೊ ಮಹಾವಾರಾಶಿಯುಂ ಕೋಪದು
ಜ್ವಳನಿಂ ಬತ್ತಿಸನೋ ಮಹೀತಳವ ಪಾಂಸುಪ್ರಾಯಮುಂ ಮಾಳ್ಪನೋ
ಜಳಜಾಪ್ತಾದಿಗಳಂ ಪೊರಳ್ಚುವನೊ ದೇವಾನೀಕಮುಂ ಸುಟ್ಟು ಕಿ
ರ್ಚಳುರಲ್ ಮಾಳ್ಪನೊ ಕೃಷ್ಣನಂ ಪಿಡಿದು ಮುಕ್ಕಲ್
ಪಾರ್ಥನೇನಿರ್ಪನೋ ||೧೧||

ಸಿಡುಮುಯ್ಲ್ ಕರ್ಚಿದವೊಂದುಮೆತ್ತಿ ಕಡುಗಂಟಾಗಿರ್ದ ಸೀಳ್ಪುರ್ಬುಮುಂ
ದಡಿಯಿಟ್ಟೆತ್ತಿದ ಕಯ್ಯ ಕೂರಲಗು ಕಾರುತ್ತಿರ್ಪ ಕಿರ್ಚಿಂಗಳಂ ||
ಪಡಿಯೆಂದೆಂಬಿನಮಿಟ್ಟ ದಿಟ್ಟಿಗಳನೆಯ್ದೇಳ್ಪಿಂಗಳಂ ಪೆರ್ಚಿರಲ್
ಬಿಡುಗಣ್ಣಿರ್ ಗುಡಿಗಟ್ಟೆ ಗೆಂಟರೊಳೆ ನಿಂದಂ ಕಾಳೆಗಕ್ಕರ್ಜುನಂ ||೧೨||

ಮರೆವೊಕ್ಕವನಂ ಕೊಂದನ
ಶರೀರಮಂ ಚುಚ್ಚಿ ಕೊಚ್ಚಿ ಕೆಡಪುವುದೀಗಳ್॥
ಪೊರೆಯುಲ್ಕಾರದ ಮತ್ತಮ
ವುರಿಗಿಕ್ಕುವುದುಳಿದುದಿನಿತನೇನುಳಿದಪೆನೇ ॥೧೩॥

ಘನತೇಜೋನ್ವಿತನಾದೊಡೇಂ ತನಗೆ ನಂಟಾಗಿರ್ದೊಡಿನ್ನೇಂ ಸುದ
ರ್ಶನ ಚಕ್ರಂಬಿಡಿದಿರ್ದೊಡೇಂ ಯದುಕುಲಪ್ರಾಕಾರನಾಗಿರ್ದೊಡೇಂ ॥
ವನಜಾಕ್ಷಂ ನಿಜವಾದೊಡೇಂ ಗಯನನಾಂ ಬಿಟ್ಟನ್ನೆಗಂ ಪೊಯ್ದು ಕೊಂ
ದನೆ ನಿನ್ನೀ ಕಡುಗೈದವಕ್ಕೆ ವಿಧಿಪೆಂ ದೋರ್ದಂಡದಿಂ ದಂಡಮಂ॥೧೪॥

ನಿನಗೆಲ್ಲಿ ಸಮರಧರ್ಮಂ
ನಿನಗೆಲ್ಲಿದೆ ಬೀರದದಟು ಕೈತವನಪ॥
ನ್ನನೆ ಗಂಡಿರ್ದ*ಯೆಲ್ಲಿದೆ ನಿನ
ಗನುವರವೇತಕ್ಕೆ ಯೇಕೆ ಪುಟ್ಟಿದೆಯೆಲವೋ ॥೧೫॥

ಗದ್ಯ ॥ ಎಂದಾರುತ್ತುಂ ದೆಸೆಯೆತ್ತಣ್ಗಾಗಸಮೆತ್ತಣ್ಗೆಂಬಿನಮ
ಸ್ತ್ರಸಂತತಿಯಂ ಕವಿಸುತ್ತುಂ ತೆಂಗಿದು ಸಾಲದೀತನೀಗಳೆ ತೀರ್ಚ
ಲ್ವೇಳ್ಕುಮೆಂದು ನರಸಿಂಹಾವತಾರಿಗೆ ಮುನಿದ ಶರಭಾವತಾರಿಯ... ತೆ
ನರಂ ಕರಂ ಮನಿದಂದಿನಿಂದ್ರಕೀಲದೊಳ್ ತನಗಾ ಮೇರುಧನ್ವ
ನಿತ್ತ ಮಹಾಸ್ತ್ರಮಂ ತೆಗೆದು ಸಿಂಜಿನಿಗೇರಿಸುವುದುಂ—

ದೆಸೆ ಚೀರ್ದ್ದದಾಗ ಖಗಮೃಗ
ವಿಸರಂ ಬೆಂದತ್ತು ಗಾಳಿ ತೊಲಗಿತು ಕಟ್ಟು॥
ಬ್ಬಸನಾದುದು ಲೋಕಕ್ಕಾ
ಪೊಸ ಅಲಗಂ ತುಡುಸನಂ ಪೃಥಾಸಂಜಾತಂ ॥೧೬॥

ಶಿವನಿಕ್ಷಸ್ತ್ರಮಂ ಸತ್ವಮೋ ಹರಿಗೆ ಶೈವಾದ್ವೇಷಮೋ ನೋಡೆ ಗಾಂ
ಡಿವನಿಷ್ಪನ್ನತ ಶಕ್ತಿಯೋ ತಿಳಿಯಲಾರೆಂ ಕಾರಣಂ ದಿವ್ಯಬಾ ॥
ಣವದಂ ಘಾದಿಂದಲೆಚ್ಚೊಡುರಿಯುಂ ಕಾಳುತ್ತೆ ಶ್ರೀಕೃಷ್ಣನಂ
ತವೆ ತಾಗಿತ್ತಿಳಿಗಾಕ್ಷಣಂ ಕೆಡಪಿತೇನೆಂಬೆಂ ಮಹಾಕ್ರಾಂತಿಯಂ ॥೧೭॥

ಗದ್ಯ॥ ಅಂತಾದೇವಕೀನಂದನಂ ಪಾರ್ಥನ ಸತ್ವಾಲೋಕನಮಂಗೆಯ್ದು ಮಲಗಿರ್ಪಿನಂ-ಫಲುಗುಣಂ ತನ್ನ ಸತ್ವಾಲೋಕನಮಂಗೆಯ್ದು ಮತ್ತಮಪೂರ್ಣ ಪ್ರತಿಜ್ಞಾಕ್ಷರನಾಗಿರ್ದುದರಿಂ ತಾನೆ ತನ್ನನಗ್ನಿದೇವಂಗೆ ಸಮರ್ಪಿಸಲ್ ಬಗೆದು-ಬಂಡಣದೊಳ್ ಪ್ರೋಣಚರ್ ಬಿಳ್ದ ಬಟರ ಕಯ್ದುಗಳನೊಂಡೆದೆಯೊಟ್ಟಿ ತನ್ನ ಕೂರಲಗನೊಂದನೊಂದರ್ಕೆ ತಗುಳ್ಚಿ ಕಿರ್ಚಂ ಪಡೆಮ ಪ್ರೊತ್ತಿಸಿ ಕೆಂಡದ ಕೊಂಡಮನೇರ್ಪಡಿಸುತ್ತಿರೆ-ಯಮನಂದನ ಭೀಮ-ನಕುಲ-ಸಹದೇವರುಮಿತರ ಗಂಧರ್ವನಿಕಾಯಮುಂ ಮುಂದರಿಯದೆ ಮಿಡುಕುತ್ತಿರೆ-ಒಂದೆಡೆಯೊಳಾ ಹರಿಗೆ ಯಾದವ ಭಿಷಜರ್ ಚಿಕಿತ್ಸಾ ಶುಶ್ರೂಷೆಗಳಂ ಬಗೆಯರಿದು ಮಾಡಿನೋಡುತ್ತಿರೆ-ದೇವಕಿಂತಿಣಿಯುಂ ಲೋಕದ ಭವಿತವ್ಯಮಂ ಚಿಂತಿಸುತ್ತ ಭವಂಗೆ ಮೊರೆಯಿಡುತ್ತಿರೆ-ಎತ್ತಲುಂ ಹಾಹಾಕಾರಮೊರ್ಮೊದಲೆ ಪೆರ್ಚುತ್ತಿರೆಯಿರೆ-ಭೂಮಾತೆ ಬಂದು ವಾಸವಾತ್ಮಜನಿಂ ಕೆಡೆದ ವಾಸುದೇವನಂ ನೀಡುಂ ನೋಡಿ ಪಳಯಿಸುತ್ತಿರ್ದಳದೆಂತೆನೆ —

ದುರುಳರ ನಾಶಕೆ ಸುಜನರ
ಪರಿಪಾಲನೆ ಧರ್ಮದುನ್ನತಿಗೆ ಹರಿ ನೀಂ ಪು ॥
ಟ್ಟಿರೆ ಪಣ್ಣುಡುವಂದು ಮರಂ
ಮುರಿದಂತಿರೆ ನರನ ಕರದ ಶರದಿಂ ಬಿಳ್ದೈ ॥೧೮॥

ಸಿಸುತನದಿಂ ತೊಡಂಗಿ ಹರಿನೀಂ ರವಿಯಂತೆ ತಪೋವಿನಾಶನ
ನ್ನೆಸಗಿದೆ ಭಾರರಪ್ಪರೊಳರಿನ್ನದರಿಂದರೆಗಜ್ಜವಾದುದಾ॥
ಗಸದೆ ಮುಗಿಲ್ ಮುಸುಂಕೆ ರವಿಬಿಂಬವನಾಗಲೆ ಕತ್ತಲೆತ್ತಲುಂ
ನುಸಗದೆ ದುಷ್ಟರುಂ ಮುಸಗರೇ ನಿನಗೆಳ್ಚರುವಂತುಟಾಗದೇ ॥೧೯॥

ನಟ್ಟಿರುಳೊಯ್ದು ಘೋರವನಮಧ್ಯದೆ ಬಿಟ್ಟಿಯೊ ಪಾರ್ಥಿವಂಧ್ಯದೋಳ್
ತೊಟ್ಟನೆ ಲೋಕಜೀವನದ ನೌಕೆಯನಳ್ದಿಡೆಯೋ ಖಳಾರಿ ಕ॥
ಣ್ಗಟ್ಟದೆ ತಿರ್ರನೆಯ್ದಿ ತಿರುಪುತ್ತೆ ಬಿಸುಟ್ಟೆಯದೇಕೆ ಸರ್ವರುಂ
ಕಟ್ಟಳಲಿಂದೆ ಮುಂದರಿಯದಿರ್ಪನಮೇಂ ನುಡಿಧೇನ ಮಾಡುಮೆಂ ॥೨೦॥

ಹಲವಾಡಿ ಬೀಳ್ವ ಮಕ್ಕಳ್
ಪೊಲೆ ಸತ್ತಾಲೋಕನಕ್ಕೆ ಕಯ್ಯಿಕ್ಕಿತು ವಿಾ ॥
ನೆಲದೊಳ್ ಬಿಳ್ದಿನ್ನುಂ ನೀ
ನೊಲವಿಂದೇಕೇಳೆ ಕೇಳೆ ಮಾತಣದೇಕೋ ॥೨೧॥

ನಂದಂ ಕರೆವಂ ಗೋಪಿಕೆ
ಕಂದಾ ಬಾ ಪಾಲಿದೆಂಬಳದೊ ಪೆತ್ತಾ ತಾ॥
ಯ್ತುಂದೆಗಳುರೆ ಕೋಳ್ಗುದಿವರ್
ಬಂಧನದಿಂ ಬಿಡಿಸೆನುತ್ತೆ ಕೇಳೆಯೊ ಮೊರೆಯಂ ॥೨೨॥

ಆನರಿಯದ ಮಾನವರನು
ಮಾನಿಸದ ಚತುರ್ವರ್ಷಿಂ ನಿಯೋಜಿಸದೊಂದಿ॥
ತೀನಿಯುತಿಯಾದುದೆನಲಾ
ಪೇನೆಂಜೆಂ ಶಿವನನುಳಿಯೆ ಗತಿಮತಿಯೊಳವೇ ॥೨೩॥

ಗದ್ಯ॥ ಎಂದಾಗಳಾ ಗೋಮಿನೀದೇವಿ ಸದಾಶಿವನುಂ ಮೃತ್ಯುಂಜಯನುಮಾದ ಪರಮೇಶ್ವರನಂ ಪ್ರಾರ್ಥಿಸಲೊಡರ್ಚಲೊಡನಲ್ಲಿರ್ದ ಮಾನವರುಂ ಗಂಧರ್ವರುಂ ಕಿನ್ನರದೇವತಾಗಣಂಗಳುಮಭವಂಗೆ ಬದ್ಧಾಂಜಲಿಮುಕುಳೈಕಮನಸ್ಕರಾಗಿ ಸರ್ವಸಂಕಟಮಂ ಪರಿಹರಿಪ್ಪುದೆಂದಾ ವಿಷಧರನಂ ಬಿಡದೆ ಬೇಡುತ್ತಿರ್ಪಾಗಳ್ —

ಮಾತ್ರೆಯಿಂ ಸೆರೆವರಿಯುತೆ ನೆಲ
ಯ್ವಿತ್ತಂಶುವ್ರೋ ಸೋರಿ ಬಿಳ್ದ ಬಹುರಾಶಿಯ ವಿ॥
ಮೃತ್ಯೋ ಎನೆ ಪೂಡಿದುದು
ದೃತ್ತೀಜೋರಾಶಿಯಲ್ಲಿ ಕಣ್ಣುಳ್ಕುವಿನಂ ॥೨೪॥

ಪ್ರಮಥರ್ಕಳ್ ಗಣವೇಷದಿಂ ನೆರೆದು ಸಾಲ್ಸಾಲೊಳ್ ಸಮಾನಾಂತರ
ಕ್ರಮದಿಂ ಸಾಯುಧರಾಗಿ ರಂಜಿಸುವಿನಂ ವಿದ್ಯಾಧರಾದಿತ್ಯ ಸಂ॥
ಘವಿಪ ಸಂದೋಹಮುಮೊಂದಿ ಸಜ್ಜನಚಯಂ ರಾರಾಜಿಸುತಿರ್ಪಿನಂ
ಪಮೇಯಸ್ತುತಿಗಾನಮೇಂ ಪುಸಗಿತೋ ಶ್ರೀಪಾರ್ವತೀನಾಥನಾ ॥೨೫॥

ಶಿವನ ಗುಣಕೀರ್ತನವನೆಸ
ಗುವೆನೆಂದೆನಲಂದು ಬಾಣೆಯಾಂ ಬರಿಸಿದೊಡಂ॥
ಶಿವೆ ನಾಲ್ಮೊಗವಾಂತೊಡಮೇಂ
ಪೆಸೆಯಿಕ್ಕದೆ ನುತಿಸುತಿರ್ದನಾ ಕಮಲಭವಂ ॥೨೬॥

ಗಿರಿಜಾತೋಪೇತನುಂ ಷಣ್ಮುಖ ಗಣಪತಿ ಸಂಯುಕ್ತನುಂ ವಾರಣತ್ವಕ್
ಪರಿಧಾನಂ ವ್ಯೋಮಕೇಶಂ ಶಶಿ ದಿವಿಜನದೀ ಶೇಖರಂ ಭೋಗಿಭೂಷಂ॥
ಸುರುಚಿ ವ್ಯಾಪ್ತಾಖಿಳಾಶಾವಳಯನಮಿತ ಭಸ್ಮಾಂಗಶೃಂಗಾರನಾದ್ಯಂ
ಪರಮೇಶಂ ಪ್ರಾಕ್ತನಾಶಂ ನಿರವಧಿಕರುಣಂ ಕೋರ್ದನಾ ಭಕ್ತ
ಪೋಷಂ ॥೨೭॥

ಗದ್ಯ॥ ಅಂತು ಬಂದು ನಿಂದಲ್ಲಿ ಬಿಳ್ದ ದೇವಕೀನಂದನನ ನೆತ್ತಿಯುಂ-ಶಿರವರಿದುರುಳ್ದ ಗಯನಂ ಸಚೇತನನಂ ಮಾಡಿಯುಂ-ಹವ್ಯವಾಹನಂ ಬಲವಪ್ಪ ಸವ್ಯಸಾಚಿಯಂ ಕಯ್ವಿಡಿದು ತಡೆದುಂ-ತನ್ನ ಕೃಪಾಕಟಾಕ್ಷ ವಿಕ್ಷೇಪದಿಂದಾ ಕಾದಾಟದೊಳ್ ಕಡೆದ ಪಡೆಯ ಬೀರರ್ಗೆ ಪುನಃ ಪ್ರಾಣ ವಾಯುವಂ ದೊರೆಕೊಳಿಸಿಯುಂ —ಕರುಣಾಸಾಗರಂ ಹರಂ ಹರ್ಷಿನರರ್ಗಭಿಮುಖಗಿಂತೆಂದಂ —

ಜಗದೊಳ್ ನಿಮ್ಮಿಂದೆ ಮಾಡಲ್ಪಡೆವಪ್ಪೊಳ್ಳವು ಸ್ವೋಲ್ಲಿಂದುಗಜ್ಜಂಗಳಿಂತೀ
ಜಗದೊಳ್ ಸುಕ್ಷೇಮವುಂ ಶಾಂತಿಯುಮುನ್ನತಮಹಿಂಸಾಗುಣಂ
ಪೆರ್ಚಿ ನಿಲ್ಕುಂ॥
ಮಿಗುವುದ್ಯತ್ ಕ್ಷಾತ್ರತೇಜಂವಿ ಪುಳಮಹಿಮಸುಬ್ರಹ್ಮತೇಜಂ ಕರಂ ಕೂ
ಡಿ ಘನತ್ವಂ ತಾಳ್ದು ವಿಶ್ವಂ ಮೆರೆಗೆ ಭುವನದೊಳ್ ನಿಲ್ಕೆ
ಮಾನುಷ್ಯಧರ್ಮಂ ॥೨೮॥

ಕೇಳೆಯೊಂದೆ ಬೇಷ್ಟ ಪುರುಷಾ
ಕೇಳಿ ನಿಮ್ಮಲ್ಲಗಲದಿರ್ಕೆಯಿಾ ಕೇಳಿತನವುಂ
ಇಳೆಯಲ್ಲಿ ಸಾರಿ ನಿಚ್ಚಂ
ಬಳೆವಂತೆಸಗುವುದು ಧರ್ಮಮಂ ಶಾಂತಿಯುಮಂ ॥೨೯॥

ಗದ್ಯಂ॥ ಎಂದೆಲ್ಲರ್ಗಂ ಪರಸುವುದುಮಾ ಶಿವಸಭೆ ತನ್ನಿಂ ತಾನೆ ಮಾಯವಪ್ಪುದುಂ-ಖೇಚರನಪ್ಪ ಗಯನನೂನ-ಸಂತೋಷ ಭಾರವಿನಮ್ರ ಮನಸ್ಕನಾಗಿ ಶ್ರೀಕೃಷ್ಣಾರ್ಜುನಾದಿಗಳ್ಗೆ ಪೊಡೆವಟ್ಟು ನಿರಂತರಸ್ಮರಣೀಯಾರ್ಜುನ-ಕೃತಕೃತ್ಯತಾ-ವಿಚಾರಾನ್ವಿತಂ ವಿಮಾನಾನ್ವಿತಂ ವಿಯತ್ತಳಕ್ಕೆಯ್ದುವುದುಂ-ಕೌರವ ಸೇನಾಪ್ರಮುಖರಪ್ಪ

ಭೀಷ್ಮದ್ರೋಣಾದಿಗಳ್ ಹರನುಪದೇಶಂ ಗೆಯ್ದು ಕೆಳೆಯನೆ ಬಗೆಯೊಳ್ ಬಗೆದು ಪಾಂಡವರ್ ನೇಮುಂಬಿಡಿದಜ್ಞಾತವಾಸಮಂ ತೀರ್ಚಿದ ಬಳಿಕ್ಕೀ ಸಂದುಗಜ್ಜದ ಬಿಸುಗೆದಗುಳ್ಕೆಯುಂ ಕಯ್ಗೂಡಿಸಲಕ್ಕುಮೆಂದರಿತು ನಿಶ್ಚಯಿಸಿ ಸಕಲ ಸೇನಾ ಸಹಿತಂ ಕೌರವನನೊತ್ತಿ ಹಸ್ತಿನಾವತಿಗೆಯ್ದುವುದುಂ-ಪಾಂಡುಪುತ್ರರ್ ಸತ್ಯವ್ರತರುಂ ಕೃತಾರ್ಥರುಮಾಗಿ ತಮ್ಮ ಪಿರಿಯರ್ಗೆ ವಿನಮಿಸಿ ಶ್ರೀಕೃಷ್ಣ ಬಲದೇವಾದಿ ಯಾದವರನಾದರಿಸಿ ಕೈಗೊಟ್ಟು ದೊರೆಗೆಯ ಮರುವಣಿಯಕ್ಕೆ ಬೀಳ್ಕೊಟ್ಟು ತಮ್ಮ ಕಾಡುವನೆಯನೆಯ್ದಿದರೆಂಬಲ್ಲಿಗೆ—

ಇದು ಕೃಷ್ಣನದಿದು ಪಾರ್ಥನ
ದಿದು ಕವಿಕೇಶವನದೆನಿಸಿ ಸತ್ಪಾಲೋಕಾ॥
ಸ್ಪದ ಸತ್ಪಾಲೋಕನ ಕಾ
ವ್ಯದ ವಿಸ್ತೃತಿಯಾಯ್ತು ಕಾಣ್ಕೆ ಕನ್ನಡಕೀಗಳ್ ॥೩೦॥

ಬೆಳಕಿತ್ತರ್ ಕವಿಸಂಪ-ರನ್ನ-ವರರುದ್ರಾಂಡಯ್ಯ ಮುಂತಾದವರ್
ವಿಳಸತ್ಕಾವ್ಯ-ಸುರತ್ನ-ದೀಪ-ತತಿಯಿಂ ಸಾಹಿತ್ಯ-ಸುಕ್ಷೇತ್ರದೊಳ್ ॥
ಬಳಿಕಾನುಂ ಪೊಸಗಬ್ಬಮಂ ಪಣತೆಯೊಂದಂ ಪೊತ್ತಿಸಲ್ಕಾರ್ತೆನೇಂ
ತಿಳಿಯೆಂ ಮಾಳ್ಪುದೊ ಮಾಡದೋ ಬೆಳಕನಾಂ ಕರ್ತವ್ಯಮಂ
ಮಾಡಿದೆಂ ॥೩೧॥

ಅರನೇಗಳ್ ನೆಲಸಿರ್ಕೆ ಭೂವಲಯದೊಳ್ ಸಾಹಿತ್ಯ ಸಾಮ್ರಾಜ್ಯದೊಳ್
ಮಿರುಗುತ್ತಿರ್ಕೆ ಸುಕಾವ್ಯರತ್ನನಿಚಯಂ ವಿದ್ವಾಂಸರೊಳ್ ನೇಹಮೆ ॥
ಚ್ಚರುಗೊಳ್ಪಿಂ ಜನರೆಲ್ಲರೊಂದಿ ಸೊಗದಿಂದಂ ಬಾಳ್ಗೆ ನಿಷ್ಕಾಮದಿಂ
ಪ್ರೊರೆಯ್ಗೇರ್ಗೆಲ್ಲವರುಂ ಜಗಕ್ಕೆ ಹಿತಮಂ ಪಾಲಿಕ್ಕೆ
ಮೃತ್ಯುಂಜಯಂ ॥೩೨॥

ನಿತ್ಯಂ ಸಚ್ಚರಿತಾಕಥಾಮುದಿತರುಂ ನಾಜ್ಞಾನಸೈಶ್ವರ್ಯಸಂ
ಯುಕ್ತರ್ ವಿಶ್ವವಿನೀತಸಂಸ್ಕೃತಿ ಪರಿತ್ರಾಣರ್ ಸ್ವಕರ್ತವ್ಯಸಂ ||
ಸ್ತುತ್ಯರ್ ಜಾತಿಮತಾದಿ ಭೇದರಹಿತರ್ ಶ್ರೀಮಾತೃಭೂಮಿಗಾ ಹಿತ
ಪ್ರೀತ್ಯರ್ಥರ್ ಮೆರೆಗೆಲ್ಲ ಸಜ್ಜನವರರ್ ವಿಶ್ವೇಶನೇಕಾಜ್ಞೆಯಿಂ ॥೩೩॥

ಮಳೆಯೋಗಳ್ ಸರಿಗಾಲದೊಳ್ ಕರೆಗೆ ತಕ್ಕಂತೆಲ್ಲ ಸಸ್ಯಾಳಿಯುಂ
ಬೆಳೆಯುತ್ತಿರ್ಕೆ ಪಯಂಗಳೀಗೆಯಿನಿವಾಲಂ ವಾಹನಂಗಳ್ ಚಲ॥
ಕ್ಕೆಳಿಯೊಳ್ ಸತ್ಯ-ಸುಶೀಲ-ಶಾಂತಿ-ಬಲ-ಶೌರ್ಯಂ ಸ್ಥಾಯಿಯಾಗಿರ್ಕೆರಿಂ
ಜ್ವಳನಾಗೊಪ್ಪುಗೆ ರಾಮರಾಜ್ಯ ವಿಭವಂ— ॥೩೪॥

**ಭದ್ರಂ ಶುಭಂ ಮಂಗಳಂ**

ಎಂಬಲ್ಲಿಗೆ ಸತ್ವಾಲೋಕನ ಕಾವ್ಯದೊಳ್

ಪಾ ರ್ಥ ಪ್ರ ತಿ ಜ್ಞಾ ರ ಕ್ಷ ಣಂ

ಅಷ್ಟಮಾಶ್ವಾಸಂ

❋ ❋ ❋ ❋ ❋ ❋ ❋ ❋

ಕೇಸೀಯಕವಿಕೃತ ಸತ್ವಾಲೋಕನ ಕಾವ್ಯಂ ಸಂಪೂರ್ಣಂ

ಶ್ರೀರಾಮಚಂದ್ರಾರ್ಪಣಮಸ್ತು

ಮ ಂ ಗ ಳ ಂ

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪದ್ಯ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| ೬ | | ೩ | ಪಕ್ಷಿಕಾಯಂ | ಪಕ್ಷಿನಿಕಾಯಂ |
| | | ೧೫ | ಯರೆ ಚರಣದೊಳೆ | ಯರೆಚಣದೊಳೆ |
| ೭ | | ೧೯ | ಜಾಲತದಿಂ | ಜಾಲಕದಿಂ |
| ೮ | ೨೭ | ೧ | ದಿಕ್ಪಾಳಿ | ದಿಕ್ಪಾಪಾಳಿ |
| ೧೫ | ೨೦ | ೪ | ಲೋರ್ವರಲ್ಲಿ | ಲೋರೊರ್ವರಲ್ಲಿ |
| ೫೮ | ೨೮ | ೨ | ಗಿರಿಶವ | ಗಿರಿಶನ |
| ೬೧ | | ೧೪ | ಮರೆದಿಯುದಿರ್ | ಮರೆಯುದಿರ್ |
| ೬೨ | ೪೩ | ೨ | ದೈವಪೊತ್ತ್ರ್ಯಸಲಾ | ದೈವಮೊತ್ತ್ರ್ಯಸಲಾ |
| | ೪೩ | ೩ | ಕಾದುದೆ | ಕಾದುವೆ |
| ೬೪ | ೫೨ | ೩ | ತಿಳಿದನತಿ | ತಿಳಿದದನತಿ |
| ೬೯ | | ೧೬ | ಕೈವದರಿಂ | ಕೈದವದಿಂ |
| | ೧೨ | ೩ | ಡೀಗಲ್ಲಿ | ಡೀಗಳಲ್ಲಿ |
| ೭೨ | ೨೦ | ೨ | ಪೋಂತುಮಾ | ಪೋಕುಮಾ |
| ೭೪ | ೨೩ | ೧ | ಕುಳುಬಲ | ಯದುಬಲ |
| ೭೬ | ೩೧ | ೪ | ದುಹಾ | ಮುಹಾ |
| ೭೮ | | ೨ | ಮಸೆದದ್ದಣಂ | ಮಸೆದಡ್ಡಣಂ |
| | ೩೬ | ೩ | ಮೂಲಿಕು | ಮೂಲಿಕು |
| ೭೯ | | ೫ | ಅಂತಗುರ್ವುರ್ತತ್ರಾ | ಅಂತಗುರ್ವುರ್ನೆತ್ರಾ |
| | ೪೦ | ೩ | ತತ್ಸರಮು | ತತ್ಪರಮು |
| ೮೧ | | ೫ | ವಿಕಥ | ವಿತಥ |
| ೮೨ | | ೨ | ನೆರಿಬಾತಂ | ನೆಂಬಾತಂ |
| | ೫ | ೪ | ಭ್ರಮಿಸಿ | ಭ್ರಮಿಯಿಸಿ |
| | | ೭ | ಅಳಿಗಗ್ಗಳಂ | ಅಣೆಗಗ್ಗಳಂ |
| | ೬ | ೪ | ತಾನಿಪೆ | ತಾನೆನಿಪೆ |

| | | | | |
|---|---|---|---|---|
| ೮೩ | | ೧೫ | ನೆರವಪ್ಪಂಕುಟಾ | ನೆರವಪ್ಪಂತುಟಾ |
| ೮೮ | ೩೧ | ೨ | ದೆಯ್ | ದೆಯುಯ್ |
| ೮೯ | ೩೯ | ೨ | ಕೈಬೆಟ್ಟ | ಕೈವೆಟ್ಟ |
| ೧೦೦ | | ೧೮ | ತಳ್ಪಿದೊಡೆ | ತಳ್ವಿದೊಡೆ |
| ೧೦೧ | ೨೯ | ೪ | ಭೋರೆರಿದು | ಭೋರೆಂದು |
| ೧೦೬ | | ೧೪ | ಈತನೀಗಳೆ | ಈತನನೀಗಳೆ |
| ೧೦೬ | | ೯ | ನೊಂಡೆದೆ | ನೊಂದೆಡೆ |
| ೧೦೯ | ೨೬ | ೪ | ಎಪೆ | ಎವೆ |
| | ೨೭ | ೪ | ನಿಠದಧಿ | ನಿರವಧಿ |

## ಕೃತಿ ಪರಿಚಯದಲ್ಲಿ

| ಪುಟ | ಪಂಕ್ತಿ | | |
|---|---|---|---|
| ೨ | ೧೬ | ದುಷ್ಕರ | ದುಷ್ಟರ |
| ೪ | ೧೩ | ಸಾಕಾಗಿದೆ | ಸಾಗಿದೆ |
| ೬ | ೧೬ | ಭಾಗ್ಯ | ಭಾಗ |
| | ೨೦ | ಗರು | ಗುರು |
| ೭ | ೨ | ಸತ್ವಣಾ | ಸತೃಣಾ |
| | ೨೧ | ವೆಸಿನುವುದು | ವೆನಿಸುವುದು |
| ೮ | ೩ | ಪೋಫಕಾಂಶ | ಪೋಷಕಾಂಶ |
| | ೭ | ಲೆತ್ನಿಸಿಕೊಂಡಿದೆ | ಲೆತ್ತಿಕೊಂಡಿದೆ |
| ೯ | ೧೦ | ಋಷಿವೀರ್ಯನು | ಋಷಿವರ್ಯನು |
| ೧೦ | ೩ | ಆಶ್ಮವತ್ | ಆತ್ಮವತ್ |
| | ೧೭ | ಅಧಿದೇವ | ಅಧಿದೇವ |
| ೧೧ | ೧೩ | ಕರ್ತವ್ಯ | ಕರ್ತೃ |
| ೧೨ | ೨೦ | ವಿಚಾರವು | ಅರ್ಥವಿಚಾರವು |
| ೨೦ | ೬ | ಹರಿಸಿ | ಹರಸಿ |
| ೨೮ | ೧೫ | ಹಿಡಿಯುಉವವರು | ಹಿಡಿಯುದವರು |
| | ೧೬ | ಹೋರಾಡುವವರು | ಹೋರಾಡದವರು |

# ಟಿಪ್ಪಣಿ ಮತ್ತು ಶಬ್ದಾರ್ಥಗಳು

---

## ಪ್ರಥಮಾಶ್ವಾಸ

ಪದ್ಯ ೧—ಈ ಪದ್ಯವು ಶ್ಲೇಷೆಯಿಂದ ಶಂಕರ-ನಾರಾಯಣಸ್ತುತಿಯಾಗಿದ್ದು, ಎಂಟು ವಿಶೇಷಣಗಳಲ್ಲಿ ಪ್ರತಿಯೊಂದು ಕ್ರಮಾನುಗುಣವಾಗಿ ಆಯಾ ಆಶ್ವಾಸದ ಕಥಾಭಾವ-ನಿರೂಪಕವಾಗಿದೆ. ಶ್ರೀದೇವಿ= ಸಂಸದ್ಯುಕ್ತಳಾದ ಪಾರ್ವತೀದೇವಿ, ಲಕ್ಷ್ಮೀದೇವಿ. ಪ್ರಾಯ= ಪ್ರಧಾನ, ಪರಿಶುದ್ಧ. ಸುಮುಖ= ಗರುಡ, ಗಣಪತಿ, ಚೆನ್ನಾದ ಮುಖವುಳ್ಳವ. ಉದಂತ = ವೃತ್ತಾಂತ. ಪಂಚವದನ = ಐದು ಮುಖಗಳುಳ್ಳವ, ನರಸಿಂಹಾವತಾರಿ, ಸಿಂಹ. ಶ್ರೀಶಂ = ವಿಷ್ಣು. ಕರಂ = ಚೆನ್ನಾಗಿ, ಲೆಂಕ = ಭಕ್ತ.

ಪದ್ಯ ೨—ಆಪಂ= ವಿಶೇಷವಾಗಿ. ಮಾಳ್ಕೆ= ಮಾಡಲಿ. ಶ್ರುತಿ= ವೇದ. ಆರ್ತಿ= ವ್ಯಥೆ, ಶಿವ= ಮಂಗಳಕರ. ಸಕಲಗಂ= ಎಲ್ಲ ಕಡೆ ಸಂಚರಿಸುವವ. ಈಗೆ= ಕೊಡಲಿ. ವಾರಾಶಿ= ಸಮುದ್ರ. ಸತ್ + ಗಣ= ಸತ್ಪುರುಷರ ಸಮೂಹ, ಉತ್ತಮವಾದ ಗಣ (ಗಣ = ಗುರುಲಘುಗಳ ಕೂಟ.)

ಪದ್ಯ ೪—ಅಶೇಷ = ಸಂಪೂರ್ಣ. ಪದನ್ಯಾಸ= ಪದಗಳನ್ನಿಡುವಿಕೆ, ಕವಿತಾರಚನೆ.

ಪದ್ಯ ೬—ಆಂತು= ತಾಳಿಕೊಂಡು. ಕುಕಿಲ್= ಕೋಕಿಲರವ. ಪುರುಡು= ಮತ್ಸರ. ಮಾರುತಾಘಾತ= ಗಾಳಿಹೊಡೆತ.

ಪದ್ಯ ೭—ತಕ್ಕರ್= ಯೋಗ್ಯ. ಪೂರ್ವಜರ್= ಮೊದಲು ಜನಿಸಿದವರು, ಹಿರಿಯರು. ಅನ್ನರ್= ಅಂಥವರು. ಸನ್ನುತಿಭಾಜರ್= ಸ್ತುತಿಗೆ ಪಾತ್ರರು. ಕಾಲರಥಾಂಗ= ಕಾಲಚಕ್ರ. ನಿರುಗೆ= ಪಡೆ

ವಿನ್ಯಾಸ. ಸೋಮ= ಚಂದ್ರ. ಒವಜ= ಉಪಾಧ್ಯಾಯ. ಓಜ. ಕನೀಯ= ಕಿರಿಯವ. ಊರ್ಜಿತ= ಉತ್ತಮಗೊಳಿಸಿದ. ಅಧ್ವ= ದಾರಿ. ಇಂತುಟು= ಈರೀತಿ. ಅಂಶ= ಒಂದು ಭಾಗ.

ಪದ್ಯ ೧೪— ಕೀಲಾಲಕ್ರೋಡ= ನೀರುಹಂದಿ. ಮಕರ= ಮೊಸಳೆ. ಆಕೀರ್ಣ= ಕೂಡಿದ. ಆವರ್ತ= ಸುಳಿ. ಗರ್ತ= ಸುಳಿಯ ನಡುವಣ ಬಿಲ. ಭಂಗ= ತೆರೆ. ಘನ= ಮೇಘ. ಕೂಲ= ದಡ. ದುಸ್ತರತರ= ದಾಟಲು ಅಸಾಧ್ಯವಾದುದು. ಶೀಕರ= ತುಂತುರು ಹನಿ ಡಿಂಡೀರ= ನೊರೆ. ಪಯೋದ= ಮೋಡ. ಉಡುಪ= ತೆಪ್ಪ. ದಾಸರ್= ಬೆಸ್ತರು. ಆಳಿಸಿ= ಮುಳುಗಿಸಿ. ದೀವಿ= ದ್ವೀಪ. ವನಖಡ್ಗ= ನೀರಿನ ಖಡ್ಗಮೃಗ. ವನಯಾನ= ನಾವೆ. ನೊಣೆ= ನುಂಗು. ನಕ್ರ= ಮೊಸಳೆ. ಕೀಳ್ಮೈ= ಅಡಿಭಾಗ. ಅರೆ ಎಡೆ= ಕೆಲವೆಡೆ.

ಪದ್ಯ ೨೦— ಜೃಂಭಿಸು= ಹೆಚ್ಚಳಹೊಂದು. ಅನ್ವಯ= ಆಮ್ನಾಯ. ದೊರೆ= ಆಶ್ರಯ. ವಿಚಾರ= ಪಕ್ಷಿಸಂಚಾರ, ಆಲೋಚನೆ. ಫೇನ= ನೊರೆ. ದ್ವಿಜ= ವಿಪ್ರನು, ವಿದ್ವಾಂಸ. ಪಕ್ಷಧರಾವನೀಧರ= ರೆಕ್ಕೆಯುಳ್ಳ ಪರ್ವತವಾದ ಮೈನಾಕ, ತನ್ನ ಪಕ್ಷವನ್ನು ಹಿಡಿದ ರಾಜ. ಕಲಾಧರ= ಚಂದ್ರ, ಕಲಾವಿದ. ಪತತ್ರಿ= ಪಕ್ಷಿ. ಅರಂ= ಧರ್ಮ. ವಿಭು= ಒಡೆಯ. ಕದುಂಕಲು= ಕುಟುಕಲು. ಪುಷ್ಪಾಂಜಲಿಕ್ಷೇಪ= ಹೂವಿನ ಬೊಗಸೆಯ ಚೆಲ್ಲುವಿಕೆ. ಮಿಳಿರ್ವ= ಅಲ್ಲಾಡುವ. ಬೆಳ್ವಳಿ= ಬಿಳಿಬಟ್ಟೆ. ಚಲಂಕು= ನೂಕು. ತೇಂಕು= ತೇಲು. ಪಸರ= ಅಂಗಡಿ. ಶ್ವಸನ= ವಾಯು. ಪೊಸಯಿಸು= ಹೊಸತುಮಾಡು. ರಾರಾಜಿಸು= ಶೋಭಿಸು. ಶುಂಡಾಲ= ಆನೆ. ಮೃಗಯಾ= ಬೇಟೆ. ವಿಪಂಚಿಕಾ= ವೀಣೆ, ಚತುರಸ್ರ= ನಾಲ್ಕುಕಡೆ. ದ್ವಾರಕಾಂತ= ಬಾಗಿಲುಗಳಿಂದ ಮನೋಹರ.

ಪದ್ಯ ೧೨—ತೂರ್ಯ=ಮಂಗಳವಾದ್ಯ. ನಾಡೆ=ಚೆನ್ನಾಗಿ. ಒಸೆ=ಉಷಃಕಾಲ. ತಾತ್ಪರ್ಯ=ತತ್ಪರತೆ. [ಕೊಳೆಯೊಳ್, ಅಸತ್ಯದೊಳ್, ಅಪರಿಶುದ್ಧಿಯೊಳ್, ಎಯ್ದೆ ಪ್ರೋಲಿತನಂ, ಮೆರೆಗುಂ.] ನೀಳ್=ಉದ್ದವಾದುದು. ನಿರಾತಂಕ=ಧೈರ್ಯ, ಅಭಯ. ತೀವುತ್ತುಂ=ತುಂಬುತ್ತ.

## ದ್ವಿತೀಯಾಶ್ವಾಸಂ

(ಈ ಕಾವ್ಯದ ಪ್ರತಿಯೊಂದು ಆಶ್ವಾಸ ಪ್ರಾರಂಭದ ಕಂದಪದ್ಯವು ಆಯಾ ಆಶ್ವಾಸದ ಕಥಾಭಾವ ಸೂಚಕವಾಗಿದೆ.)

ಪದ್ಯ ೧—ರೋಚಿವಿತತಿ= ಪ್ರಕಾಶಸಮೂಹ. ಪಾವಕ= ಅಗ್ನಿ. ಕೋಳ್ಗುಟ್ಟು= ಬಡಿಯುತ್ತಿರು. ವಕ್ತ್ರ= ಮುಖ. ನಾಗ= ಮಹಾಶೇಷ, ಸರ್ಪ. ದಿಙ್ನಾಗ=ದಿಗ್ಗಜ. ಹರಿಸ=ಹರ್ಷ (ಸಂ.) ಗಿರಿಸ=ಗಿರಿಶ [ಸಂ.] ಆಣತಿ= ಆಜ್ಞಪ್ತಿ. [ಸಂ.] ನಿಸದಂ=ಸತ್ಯ. ಸಂದೆಯ=ಸಂದೇಹ (ಸಂ.) ಮಾಳಿಗೆ=ಮೋಸ್ತ. ನಳಿನ=ತಾವರೆ. ಅಭ್ರ=ಆಕಾಶ. ಅಂಕೆ= ವಶ.

ಪದ್ಯ ೨—ಅನುರತಿ=ಭಕ್ತಿ. ಲೋಗರ್=ಲೋಕದ ಜನರು. ಉಮಾಕಾಂತ = ಶಿವ. ಪಕ್ಷಪನಾನದವರ್= ಪಕ್ಷಪಾತರಹಿತರ್. ಅಕ್ಷ-=ಅಚ್ಚು, ಮೂಲ. ಕೃಷ್ಣಪಕ್ಷ= ಶ್ರೀಕೃಷ್ಣನ ಪಕ್ಷ. ಅಳವು= ಸಾಮರ್ಥ್ಯ. ನೀಹಾರಕರ=ಹಿಮಕರ, ಚಂದ್ರ. ಕಿಸಲಯ= ಚಿಗುರು. ಮನ್ಮಥನ ಧನುರ್ವನ=ಕಬ್ಬಿನ ತೋಟ. ಅರವೆ= ಅಲ್ಲಲ್ಲಿ, ಕುಸುಬೀಯದೆ= ವ್ಯರ್ಥಗೊಳಿಸದೆ, ಬಿಟ್ಟುಬಿಡದೆ. ಶಂಬಾಯುಧ=ಇಂದ್ರ, ಪಾಂಡುರ = ಬಿಳಿ. ಸುದರ್ಶನಕರ=ಒಳ್ಳೆಯ ದರ್ಶನವನ್ನು ಕೊಡುವವನು, ಚಕ್ರಪಾಣಿ.

ಪದ್ಯ ೧೪— ಅತನು = ಕಾಮ. ಐಣೆದು = ಹತ್ತಿರ ಬಂದು. ಗಿಡಿವಕ್ಕಿ = ಜತೆಹಕ್ಕಿ. ಕಡುಗದಿರಂ = ಕಠಿಣವಾದ ಕಿರಣಗಳನ್ನು. ಹದಿಬತೆ = ಪತಿವ್ರತೆ. ದನ್ನು = ಧರ್ಮ. ನಲ್ಪಿರ್ದಂ = ಒಳ್ಳೆಯ ಪಾತಿವ್ರತ್ಯವನ್ನು. ಸವಳ್ತಡಿಸ = ಹೊತ್ತಾರೆಯು. ಜೇಂಗುಡಿಗ = ತುಂಬಿ. ಬಂಡು = ಮಕರಂದ. ಮೂಗುವಡಿಕೆ = ಮೂಕತ್ವ. ಬಗ್ಗಿಸಲು = ಕೂಗಲು (ಕೋಗಿಲೆ.) ಕಾರ್ಗೆತ್ತು = ಮಳೆಗಾಲವೆಂದು ಗ್ರಹಿಸಿ. ಎರಂಕೆ = ರೆಕ್ಕೆ. ಸೋನೆ = ಮಳೆ. ಪಕ್ಕಿಜುಗ = ಪಕ್ಷಿಯುಗ. ಕಯ್ಗೆಯ್ = ಸಿದ್ಧಗೊಳಿಸು, ಸಿಂಗರಿಸು. ಸಜ್ಜೆ = ಶಯ್ಯೆ (ಸಂ.) ಹಂದದ = ಅಲುಗಾಡದ. ತವಸು = ತಪಸ್ಸು [ಸಂ]. ತೂಳ = ಹತ್ತಿ. ದೂರಿಸು = ದುಃಖಿಸು. ಅಲರ್ವಿಲ್ಲ = ಮನ್ಮಥ. ಏರು = ಗಾಯ. ಬಿರಯ = ವಿರಹ.

ಆಮೋದ = ಪರಿಮಳ. ಕಲಿತ = ಮಿಶ್ರಿತವಾದ. ಸಿಂಪಿಪ = ಸೇಚನೆಮಾಡುವ. ಮೃಗನಾಭಿ = ಕಸ್ತೂರಿ. ಇಳಿಪ = ಹೀನಯಿಸುವ. ಪೋಗಿಸು = ಹೆಚ್ಚಿಸು. ಬವಸೆ = ವ್ಯವಸಾಯ [ಸಂ]. ಧವ = ಗಂಡ. ಅಟನ = ಸಂಚಾರ. ತುರುಬಿಂದಂ = ಹಸುಗಳ ಹಿಂಡು. ಅರಿದು = ಅಸಾಧ್ಯ. ಬಂಧುರ = ಸಂತೋಷಕರ. ಸಾಟಿ = ಎಣೆ.

ಪದ್ಯ ೩೩:- ಬಾಸೆವಕ್ಕಿ = ಗಿಳಿ. ಎಮ್ಮತು = ಎಮ್ಮದು, ನಮ್ಮದು. ಮಾಧವ = ವಸಂತ, ಶ್ರೀಕೃಷ್ಣ, ಬಳಿ = ಬಳಿಕ, ಮತ್ತೆ. ಮಯೂಖ = ಕಿರಣ. ವಿಪಕ್ಷಿ = ಪಕ್ಷಿಗಳಿಂದ ಆವರಿಸಲ್ಪಟ್ಟ. ಹಿಂದುಮುಂದಾಗು ರಸ = ನೀರು, ಶೃಂಗಾರಾದಿ ರಸ. ಪೆರೆ = ಚಂದ್ರ. ನಾಣ್ = ನಾಚಿಕೆ. ನಿಗುರಿಸೆ = ನೆಟ್ಟಗೆಮಾಡಲು. ರಕ್ತ = ಕೆಂಪಾದ. ಏಣ = ಜಿಂಕೆ, ಏಣಾಂಕ = ಚಂದ್ರ. ಊಹೆಯ = ಕುಂದು. ಬಟ್ಟ = ಉರುಟಾದ.

ಪದ್ಯ ೪೦— ತಟಿದಾಲಿ = ಮಿಂಚಿನ ಸಮೂಹ, ಕಣ್ಬೊಗರ್ =

ಒಚ್ಚಣೆ = ಅನುಲೇಪ. ಜಿಸೆ = ಸೇರಿಕೊಳ್ಳು. ಸ್ವಾಂತ = ಮ
ನಸ್ಸು. ಅಸುಗೆ = ಅಶೋಕ.

ಪದ್ಯ ೪೩—ಗ್ರಾವ = ಶಿಲೆ. ಕೆಂಜಡೆಯಂ = ಶಿವ. ಸಪರ್ಯಾ
= ಪೂಜೆ. ಉದ್ಯಮನ = ಮೇಲೆತ್ತುವಿಕೆ. ತೆಗಲೆ = ಎದೆ. ಕಂಡಿ =
ಆಶ್ರಯ. ಜೋಗಪಾವುಗೆ = ಯೋಗಪಾದುಕೆ. ಅರಿಲ್ = ನಕ್ಷತ್ರ.
ಪರಿಭಾಷಿತತೇಜಂ = ಹರಡುತ್ತಿರುವ ತೇಜಸ್ಸುಳ್ಳ.

ಲಸತ್ = ಶೋಭಿಸುವ. ಆಯತ = ವಿಸ್ತಾರವಾದ. ಚಿತ್ತಜ
ಹರಂ = ಮನ್ಮಥನನ್ನು ಸಂಹರಿಸಿದ ಶಿವನು. ಬೆಳ್ಪಡಿಯು = ಶಿವ.
ಅರಿಕೆಯ = ಪ್ರಸಿದ್ಧರಾದ. ಕಿತ್ತಡಿ = ಋಷಿ. ಕಾಮದಂ = ಕಾಮ
ನನ್ನು ದಹನ ಮಾಡಿದವ, ಇಷ್ಟಾರ್ಥವನ್ನು ಕೊಡುವವ ; ಶಿವ.

ಪದ್ಯ ೫೨—ಅನೂನ = ಕಡಿಮೆಯಿಲ್ಲದ. ಬೆಸಸುವಂ = ಆಜ್ಞೆ
ಮಾಡುವಾತ. ದಿಟವರಿಜು = ನಿಜಸ್ವರೂಪ. ಎಲರುಣಿ = ಹಾವು.
ಪಚ್ಚ = ಆಭರಣ. ಪಾಂಗು = ಕ್ರಮ. ಅಚ್ಚಿ = ಅಕ್ಷಿ (ಸಂ.)
ಚುರ್ಚಿದೆ = ಸುಟ್ಟೆ. ಇಚ್ಚೆಗ = ಮನ್ಮಥ. ಮಿಳ್ತು = ಮೃತ್ಯು.
ಮಿಕಂಡಣುಗ = ಮಾರ್ಕಾಂಡೇಯ. ಅಳಿದ = ಕೊಂದೆ. ಪುಚ್ಚಳಿ =
ಕೇಡು. ದುಕೂಲ = ರೇಶ್ಮೆ ವಸ್ತ್ರ. ಪವಿ = ವಜ್ರಾಯುಧ.

ಪದ್ಯ ೬೧—ನೇಹಿಗ = ಸ್ನೇಹಿತ. ಪೊಣರ್ಚಿಸು = ಕಾದಾ
ಡಿಸು. ಸೀರ್ವನಿಂದಲ್ = ಸಣ್ಣ ಜಲಕಣಗಳು. ಇಲಿದೇರಂ =
ಮೂಷಕವಾಹನ. ತೂರ್ಯಸ್ವರವ = ವಾದ್ಯಧ್ವನಿ. ಮೊಳ್ಗು = ವಂ
ದಿಸು. ರಾಜರಾಜ = ಕುಬೇರ.

ಏವ = ದುಃಖ. ಮಾಣ್ = ಬಿಡು. ಪ್ರಕೀರ್ತ್ಯನ್ವಿತಂ =
ಕೀರ್ತಿಯಿಂದ ಕೂಡಿದವ. ಪಡಲ್ವಡು = ಚದರಿಹೋಗು. ಓಪ
ನೊಳ್ = ಪ್ರಿಯನಲ್ಲಿ. ಎಡಗೇಡಿ = ಗಣಪತಿ. ಉಪಪಾದಿತ =
ಪ್ರಾಪ್ತ. ಪಾವಿತ = ಪವಿತ್ರವಾದ.

## ಚತುರ್ಥಾಶ್ವಾಸ.

ಪದ್ಯ ೧—ಪ್ರತ್ಯಯ = ವಿಶ್ವಾಸ. ಬಾಸಣಿಸಿ = ಕವಿದು. ಕುಸುಮ-ವ್ರಾತ-ಗಳತ್-ಮಧು-ವಾರಿ-ವರ್ಷದೆ = ಹೂಗಳ ಸಮೂಹದಿಂದ-ಬೀಳುತ್ತಿರುವ-ಮಕರಂದದ-ನೀರಿನ-ಮಳೆಯಿಂದ. ಮೋಳಂಬ = ತುಂಬಿ. ಕಮ್ಮಣ್ಣು = ಕರಿದು ಮಣ್ಣು. ಸೂಡು = ಬೆಂಕಿ. [ಸುಡು—ಧಾ]. ನಲ್ವರೆಪ = ಒಳ್ಳೆಯ ಬರಹ. ಅಯಃ ಫಲಕ = ಕಬ್ಬಿಣದ ತಗಡು. ಮಿಸಿಸು = ಸ್ನಾನಮಾಡಿಸು. ಬಿಸುಪೆಯ್ಗುತ್ತ = ಜ್ವರ ಕರಂಗಿ = ಕಪ್ಪಾಗಿ. ಆವಲ್ = ನೈದಿಲೆ. ಬಿರಿ = ಅರಳು. ನಿರ್ಯಾಸ = ಮರದರಸ. ಕಂಡೂಯನ = ತುರಿಕೆ. ರಂಹ = ವೇಗವುಳ್ಳ.

ಪದ್ಯ ೮—ಆವನೆಯಾದೊಡಂ = ಯಾರನ್ನಾದರೂ. ಅಜಡಂ = ಜಡನಲ್ಲದವನು. ಸನಿಯ = ಸಮೀಪ. ದಾರುಣ = ಕಠಿಣ. ಆಕ್ರಾಂತ = ಹೊಂದಿದ. ನಾಗೇಂದ್ರಪುರ = ಹಸ್ತಿನಾವತಿ. ಊರ್ಧ್ವಜ್ವಾಲ್ಯ = ಮೇಲ್ಮೊಗವಾಗಿ ಉರಿಯುವಿಕೆ. ಅಂಸಂ = ಹೊಂದುವನು. ಪುಯ್ಯಲ್ಚು = ದೂರು. ಅಂಗವೋ = ಅಭಿಪ್ರಾಯಕ್ಕೆ ಸರಿಯೋ. ಎಕ್ಕಟಿ = ಏಕಾಂತ. ಎನತು = ಎಷ್ಟು. ಪರಿಪಾಡು = ಅವಸ್ಥೆ. ಖಚರ = ಆಕಾಶ ಸಂಚಾರಿ.

ಪದ್ಯ ೧೫—ತರದಿಂ = ಅನುಕ್ರಮವಾಗಿ. ಬೆಳ್ಕರು = ಹೆದರು. ಇಂಗಡಲ್ = ಇನಿದು ಕಡಲ್, ಕ್ಷೀರಸಾಗರ. ಸಸಿವಳಿ = ಚಂದ್ರವಂಶ. ಮಿಡುಕು = ವೇದನೆ ಪಡು. ತವಿಲ್ದಾಳ್ದಡೆ = ವ್ಯರ್ಥವಾದರೆ. ಚುಚುರ್ಗೊಂಡ = ಉರಿಯುವ ಕುಂಡ. ಆರ್ಗೆ = ಯಾವಾತನು. ಪರಿಭವ = ಸೋಲು.

ಪದ್ಯ ೨೦—ಎಳೆ = ಭೂಮಿ [ಇಳಾ-ಸಂ.] ಬಿದಿ = ವಿಧಿ [ಸಂ.] ಭಾವನಂ = ಭಾವನಾಗಿರುವ ; ಮನಸ್ಸಾಗಿರುವ

ಮಾರಾನ್ = ಪ್ರತಿಭಟಿಸು. ಪಳಂಚಿಸೆ = ತಾಗಿಸಲು.

ಪಡಿಯಾಡು = ಪ್ರತಿಯಾಗಿ ಮಾತಾಡು. ಪರಿ = ವಿವರ; ಸಂಗತಿ. ಉಂತೆ = ವ್ಯರ್ಥವಾಗಿ. ಬರುವರ್ = ಏನೂ ಇಲ್ಲದ ವರು ಮೊನೆಯ ಮುಳ್ಳು = ಮೊನಚಾದ ಮುಳ್ಳು; ಯುದ್ಧವೆಂಬ ಮುಳ್ಳು. ಬಗೆ = ಭಾವನೆ. ವಾತೋದ್ಭವ ಪ್ರೇರಿತಂ = ಭೀಮ ನಿಂದ ಉತ್ತೇಜಿತನಾಗಿ; ಗಾಳಿಯಿಂದುಂಟಾದ ಉತ್ತೇಜನದಿಂದ ಕೂಡಿ. ಅರಪ್ಸಳ್ಗೆ = ರಾಜಕುಮಾರರಿಗೆ ಜುದ್ಧ - ಯುದ್ಧ[ಸಂ.] ಕುಳಿರೇಂ = ಚಳಿಯೇ. ಅಳ್ಕರೇ = ಭಯವೇ. ಗಾಸಿ = ಹಾನಿ. ಜಳಿಯಿಸುಂ = ಬಳಿಕ ಪಿಂಚಡಿ = ಹಿಂಜರಿಯದೆ. ನೆಲಕಲಂ = ಲೋಭಿ. ಒರುಂಬಂ = ಟೊಳ್ಳು ಮನುಷ್ಯ. ಹೇರಿಗಂ = ಬೇಹು ಕಾರ. ವಯಸ್ಸು = ಸ್ನೇಹಿತ. ಅದ್ವೈತಪಥದಿಂ = ಒಂದೇ ದಾರಿ ಯಿಂದ. ಅನಾಮಯ = ಆರೋಗ್ಯ. 'ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬಂಧು ಮನಾಮಯಂ'॥

ಪದ್ಯ ೨೯— ಆಟಾಳಿ = ಆಡುವ ಶೀಲವುಳ್ಳ. ಓರಗೆಯ = ಜತೆಯ. ಅಟಿಸು = ಬಯಸು. ತೊಳಪಂ = ಪ್ರಕಾಶವು. ಕುಮಾರ = ಷಣ್ಮುಖ. ಸಿತತುರಗ = ಅರ್ಜುನ. ನಮಜ್ಜಾತ = ಭಕ್ತರ ಸಮೂಹ. "ನಕಾರ್ಯಾದನ್ಯೇ ನಿಕಟೋಜನಃ" = ಕಾರ್ಯವಿಲ್ಲದೆ ಜನವಿಲ್ಲ.

ಪದ್ಯ ೩೯— ಅಯ = ಜ್ಞಾನ; ಶುಭ. ನಯ = ನೀತಿ. ಸುಪಥ್ಯ = ಅತಿಹಿತ, ಪಗೆಯಲ್ = ಹಗೆತನವನ್ನು ಮಾಡಲು. ತಗದ = ಯೋಗ್ಯವಲ್ಲದ. ನಲ್ವಗೆ = ಗೆಳೆಯ. ಬಾರ್ತೆ = ಪ್ರಯೋಜನ. ಒಪನ - ಪಗೆಯ+ಓವು+ಒಪನೊಳ್ - ಪಗೆಯಂ - ಒಡರಿಕುಂ. ಒಡರಿಕುಂ = ಉಂಟು ಮಾಡುವುದು. ತಾಗು = ಪ್ರತಿ ಭಟಿಸು. ಅರಯ್ದು = ವಿಚಾರಿಸಿ. ಅಸಕಳಿ = ಕೈ ಮಾರು. ಮಾರಿ - ಮಾಂಟು = ಹದಗೆಡು.

ಪದ್ಯ ೪೨—ಬಿಯ = ವ್ಯಯ. ಅರ = ಧರ್ಮ. ಪೋದಿಕೆ = ಹೊಡೆತ. ಅಗ್ಗದ = ಶ್ರೇಷ್ಠ. ಏರ್ = ಗಾಯ. ಕೂರ್ = ಪ್ರೀತಿಸು. ಚೆನ್ನಪೊಂಗ = ವೀರ ಅಳಿ = ಕೊಲ್ಲು.

ಪದ್ಯ ೪೭—ಅಣ್ಮು = ಪರಾಕ್ರಮ. ಹರಿ = ಕೃಷ್ಣ; ಕಪ್ಪೆ. ಪೀರನಡುವಿಂ = ದ್ವಾರಕೆಯಿಂದ; ನೀರಿನ ನಡುವಿನಿಂದ. ಅಂಬರಚರ ಕೀಟಕೆ = ಖೇಚರನಾದ ಗಯನೆಂಬ ಹಾತೆಗಾಗಿ; ಆಕಾಶದಲ್ಲಿ ಚರಿಸುವ ಒಂದು ಹಾತೆಗಾಗಿ. ಶೀರದ = ಸಾಧ್ಯವಾಗದ; ಶೀರದಲ್ಲಿರುವ, ಅರ್ಜುನದ್ರುಮ = ಅರ್ಜುನನೆಂಬ ವೃಕ್ಷದ; ಮತ್ತಿಯ ಮರದ, ಶಾಖಾಕರಮಂ = ಗೆಲ್ಲಿನಂತೆ ಬಲಿಷ್ಠವಾದ ಕೈಯ ಕಡೆಗೆ; ಗೆಲ್ಲೆಂಬ ಕೈಯ ಕಡೆಗೆ. ದಿಂತಿಕೆ = ಹಾರಲು. ನೆರೆಗುವೆ = ಒದಗುವನೆ; ಒದಗುವುದೇ? (ಈ ಪದ್ಯದಲ್ಲಿ ಶ್ಲೇಷಾರ್ಥವಿದೆ.)

ಪದ್ಯ ೪೯—ಉರ್ಕು = ಗರ್ವ. ಬೆಮೆ = ಭ್ರಮೆ. (ಸಂ.) ಬಲ್ಲಣಿ = ಬಲಿಷ್ಠ ಸೇನೆ. ಮೊನೆಗಾಳೆ = ಯುದ್ಧದ ಕಹಳೆ. ಸೂಳರಿತು = ಸರದಿ ಪ್ರಕಾರ. ಸೂಳಾಯ್ತು = ರಾಜದೂತ; ಡಂಗುರ ಸಾರುವಾತ. ಜಂಗುಳಿ = ಗುಂಪು. ಓಲಗಮಣೆ = ಸಿಂಹಾಸನ.

ಪದ್ಯ ೫೧—ಮುಂಮ್ಮನೆ = ಮನೆಯ ಮುಂದು. ಮಧುವ್ರತ = ತುಂಬಿ. ಕುಮಾರ = (ಕು-ಮಾರ) ಕೆಟ್ಟ ಮನ್ಮಥನ; ಮಕ್ಕಳ. ಮರ್ಬು = ಕತ್ತಲೆ. ರಾಗೋದ್ಬುದ್ಧ = ರಾಗದಿಂದ (ಪ್ರೀತಿಯಿಂದ) ಅರಳಿದ.

ಪದ್ಯ ೫೭—ನಿಶೀಥ = ರಾತ್ರಿ. ಪಳು = ಕಾಡು. ಅಸಕಳೆ = ಕೈ ವಿಸಾರು. ಪೊಗರ್ = ಪ್ರಕಾಶ. ಮಹತೀ = ನಾರದನ ವೀಣೆ. ಚಿಚ್ಛವಿ = (ಚಿತ್+ಛವಿ) ಜ್ಞಾನದ ಬೆಳಕು. ಸಭಿಕರ್ = ['ಸಭೆ' ಎಂಬ ಪದಕ್ಕೆ ಶೀಲಾರ್ಥದ ಇತ ಪ್ರತ್ಯಯ]. ಸಭಾಸದರು.

## ಪಂಚಮಾಶ್ವಾಸ

ಪದ್ಯ ೩—ಭಾಷಾ = ಸರಸ್ವತಿ. ಆದಲೆ = ತುದಿ. ಧಾಮ = ಮಾಲೆ. ಇಚ್ಚೆಳ = ಮನೋಹರ. ಆವಳಿ = ಮಾಲೆ. ತಾಂಟೆ = ತಾಗಿ. ಕಿಸುರ್ = ಕಲಹ. ಅಳ್ಕರ್ತಂ = ಪ್ರೀತಿಸುವವ. ಧೌತ = ಶುಚಿಯಾದ; ಬೆಳ್ಳಗಿನ. ಅವಿಷಯಂ = ತಿಳಿಯಲು ಸಾಧ್ಯವಲ್ಲ. ಸಂಯಮಾರ್ಥರ್ = ತಪೋಧನರು. ಪಚ್ಚುಗುಡು = ಪಾಲು ಕೊಡು.

ಮೊಳೆ = ಮೊಳಕೆ. ದರಸ್ಮಿತ = ಮುಗುಳುನಗೆ. ಪದನ ರಿತು = ಸಮಯವನ್ನು ತಿಳಿದು. ಇಂದೀವರ = ನೈದಿಲೆ. ಮಲ ರ್ದತು = ಅರಳಿತು. ನೆಮ್ಮು = ಆಶ್ರಯಿಸು. ಸೊಮ್ಮು = ಗರ್ವ. ಗುಡುಗುಮ್ಮಗೆ = ಸುಮ್ಮನೆ. ಕೈದವ- (ಕೈತವ - ಸಂ.) ಕಪಟ.

ಪದ್ಯ ೧೨—ಬಾರಿ = ಸರತಿ; ಒದಗಿದ ಸ್ಥಿತಿ. ನೀಡು = ಹೆಚ್ಚು ಕಾಲ. ಓಪು = ರಕ್ಷಣೆ. ಪದೆದು = ಪ್ರೀತಿಸಿ. ಪೊಳ್ತು ಕಂತೆ = ಸೂರ್ಯಾಸ್ತಮಾನವಾಗಲು. ಆಗು = ಈಡೇರಿಕೆ. ಬೀತೊಡೆ = ವ್ಯರ್ಥವಾಗಲು. ಅಗ್ಗಿ = ಅಗ್ನಿ. (ಸಂ.) ಎತ್ತು = ಮುತ್ತಿತ್ತು. ಒಡ್ಡು = ಸಿದ್ಧರಾಗು. ಸೈನ್ಯ. ಬಾವನ್ನ = ಗಂಧ.

ಪದ್ಯ ೧೭—ಮುಳ್ಗ = ಮಾಸು. ಒಸೆ = ಪ್ರೀತಿಸು ಮಂ ತಣ = ಆಲೋಚನೆ. (ಮಂತ್ರಣ - ಸಂ.) ಕಾನೀನ = ಕರ್ಣ. ಪುಚ್ಚವಣ = ಪರೀಕ್ಷೆ. ಗಿರೆ = ಮಾತು. ಕೀಳ್ಗೆಯ್ಮೆ = ಕೆಟ್ಟ ಕೆಲಸ. ಪೊಡವಡಿಕೆ = ವಂದನೆ. ಅಂಕ = ಸೈನ್ಯ; ಬಿರುದು. ಅಳವಡಿಕೆ = ಸಿದ್ಧತೆ. ಪರೆ = ವಾದ್ಯ. ಆಶ್ವಾಸಿಸು = ಸಮಾ ಧಾನಗೊಳಿಸು. ದೂರಿಸು = ಮುಚ್ಚಿಸು.

ಪದ್ಯ ೧೯—೨೩—ಅರಿದು - ಆಯ್ದು = ತಿಳಿದು ಚುನಾಯಿಸಿ. ಬಂಡಣ = ಯುದ್ಧ. ಕೌಳುಡೆ = ದಿಂಬು. ಮಿತ್ರಪುತ್ರ = ಸೂರ್ಯಪುತ್ರ; ಕರ್ಣ. ಪತ್ತೆ = ಸಮೀಪ. ಪುದುಗೊಳ್ = ಜತೆಸೇರು.

ಪದ್ಯ ೨೪ — ಪೆಣನೆಗೆ - ಅಂತು - ಆಗದು = ಯುದ್ಧಕ್ಕಾಗಿ ನಾವು ಅಶ್ವತ್ಥಾಮನೆಂಬಂತೆ ವರ್ಣಿಸುವುದು ಎನ್ನಕ್ಕೂ ಸರಿಯಲ್ಲ. ದ್ರೋಣಿ = ದ್ರೋಣಪುತ್ರ. ತಿಳಿಸಲ್ = ನಿರ್ಣಯಿಸು. ಗಳಿತ + ತ್ರಪಂ = ನಾಚಿಕೆಯಿಲ್ಲದವ. ಮಾನಾಂತಕ = ಮಾಂಗುಲಿಗ. ಕಾಡುಗುರ್ = ಕರಿಮು ಉಗುರು. ಎಂತದಕೆ = ಏಕೆ. ಪೀಳಿಗೆ = ಪೀಠಿಕೆ. ತುರಿಪ = ತುರಿಸುವಿಕೆ.

ಪದ್ಯ ೨೭—ಬಿಎತ್ತುರ್ = ಭಯಂಕರವಾಗಿ. ಸತ್ವ + ಆಲೋಕನ = ಸತ್ವದ ಪ್ರಕಾಶವು. ಅಳಿನುಡಿ = ಹಾಳುಮಾತು. ನೂನೆಗೊಳಿಸು = ಕಡಿಮೆ ಮಾಡು. ಅಣಿ = ಸೇನೆ.

ಪದ್ಯ ೩೦—ಕೂಡದುದು = ವಿರೋಧವಾದುದು. ಇರಿತ = ತಿಳಿಸಲ್ಪಟ್ಟದ್ದು; ಅಭಿಪ್ರಾಯ. ಮೂರು + ಪುರ — ಮುಪ್ಪುರ. ಬಿನ್ನಗೆ = ಕ್ರಿಯಾಶೂನ್ಯವಾಗಿ. ಕೆನ್ನಂ = ವಿಶೇಷವಾಗಿ. ಪೊಂಕ + ಉತ್ಸಾಹ. ಕೊಂಕು = ವಕ್ರತೆ. ಸಮರಿ = ಸರಿಗೊಳಿಸಿ. ಅಗುರ್ವು = ಭೀಕರತೆ. ಟೊಳಿ = ಶಿರಸ್ತ್ರಾಣ. ಬಾಡು = ಮಾಂಸ. ಸವಗ = ಕವಚ. ಇಚ್ಛೆಯಪಸಾಯ = ಇಚ್ಛೆಯೇ ರಾಜಾಜ್ಞೆ.

ಪದ್ಯ ೩೩—ಗುದಿ = ದೊಣ್ಣೆ. ಕುತ್ತುಂಗೋಲು = ಬರ್ಚಿ (ಕವಲುಗೋಲು). ಆಯದ = ಲಕ್ಷಣದ. ಪೆರ್ಗಿಚ್ಚಂಬು = ದೊಡ್ಡ ಅಗ್ನಿಬಾಣ. ತೆಗುಳ್ಚು = ಒಟ್ಟಿಗೆ ತೆಗೆದುಕೊಂಡು. ಮುಸಕ = ಸಿಟ್ಟು. ಎರ್ದೆಗೊಂಡು = ಎದೆಗೆ (ಹೊಡೆದು) ತಾಗಿ.

ನಸೆ = ಸಲುಗೆ: ದಾಕ್ಷಿಣ್ಯ- ಒಪೆಯದರು = ಪ್ರೀತಿಪಡೆವರು: ವೈರಿಗಳು- ನಿರೀಕ್ಷ್ಯ = ಗುರಿ- ಗೋಷಣೆ = ಘೋಷಣೆ (ಸಂ-)- ಒಪ್ಪೈಸು = ಬಂದುಸೇರು- ಸಂಕೆ - ಶಂಕ (ಸಂ-] ಪಡಿವರಿಸು = ಪ್ರತಿಭಟಿಸುವ- ಜಡ = ನೀರು- ಸಿರಿಯುದರ = ಶ್ರೀದ್ವಾರ-

ಪದ್ಯ ೩೯—೪೦— ಈರೆರಡು = ಎರಡು ಬಾರಿ ಎರಡು. ನಾಲ್ಕು- ನಿಸ್ವನ = ಧ್ವನಿ- ಜಂಭಾರಿ = ಇಂದ್ರ- ಆಶ್ಲೇಷ = ಆಲಿಂಗನ- ಇಂ = ಇನ್ನು-

## ಷಷ್ಠಾಶ್ವಾಸಂ

ಪದ್ಯ ೧—ಅರಿಕೆಯು = ಪ್ರಸಿದ್ಧ- ನಿಟಿಲತಟ = ಹಣೆ- ಕೇಕರ = ಕಡೆಗಣ್ಣು- ದ್ವಿಪಚಮೂ = ಆನೆಯ ಸೇನೆ- ದ್ವಿರದ = ಆನೆ- ಉರದೆ = ತ್ವರೆಯಾಗಿ- ಎನಿವಿರಿದು = ಎಷ್ಟು ಹಿರಿದು? ಸಂಭ್ರಮಿಯಿಸಿ = ತಲೆತಿರುಕ ಹುಟ್ಟಿಸಿ- ನಿಮಿಡಿ = ಅಲುಗಿಸು- ಆಯತಿ = ಸಾಮರ್ಥ್ಯ- ಇಸಪೆಯು = ಬಾಣಪ್ರಯೋಗ ಮಾಡದೆ-

ಪದ್ಯ ೯—ಏವುದು = ಏನು ಮಾಡುವುದು; ಏನು ಪ್ರಯೋಜನ- ಅಸ್ಖಲರ್ = ಸ್ಖಲನೆಯಿಲ್ಲದವರು- ಆಯುಧರ್ = ಸೇನಾಸಹಿತರು- ಧ್ವಜಿನಿ = ಸೇನೆ- ಅಧೀರ - ಧ್ವನಿಪಾತನ + ಉರು - ಸ್ವನದಂ = ಹೇಡಿಯ ಸ್ವರವನ್ನೇ ಬೀಳಿಸಿಬಿಡತಕ್ಕ ಹೆಚ್ಚಾದ ಶಬ್ದ- ದ್ವಿಷಟ್ = ವೈರಿ- ಕೂರ್ಗಣೆ = ಹರಿತವಾದ ಬಾಣ- ಮಣ್ಣಂ ಪತ್ತಿಕುಂ = ಮಣ್ಣು ಹಿಡಿಸುವುದು- ರುಗ್ದೈನ್ಯಂ = ಪ್ರಕಾಶಹೀನತೆ- ಸರ = ಶರ [ಸಂ-] ಜೋದರ್ಕಳ್ = ಯೋಧರುಗಳು-

ಪದ್ಯ ೧೫—೨೪—ತಾಪಿನಂ = ತಾಗಲು- ಅತ್ತಪರ = ಕಾಳಸದ ಹಲಗೆ- ನೇರ್ವ = ಸೀಳುವ- ಪರಿ = ಪ್ರವಾಹ; ಮಳೆ-

ಕರವಾಳ್ = ಖಡ್ಗ. ಅಟ್ಟಿ = ಮಂಡ. ಉಕ್ಕೇಳ್ = ಗರ್ವಿ
ಯಾದ ಸೈನಿಕ. ಅಸಿ = ಖಡ್ಗ. ಪಾರ್ದು = ಮೇಲೆ ಹಾರಿ
ದವನು. ಅಶನಿ = ವಜ್ರಾಯುಧ; ಸಿಡಿಲು. ಅರುಣಾಂಬು =
ರಕ್ತ. ಉಣ್ಮುವ = ಉಕ್ಕುವ. ತಾರು = ಒಣಗಿಸು. ಆಡಗು =
ಮಾಂಸ.

ಪದ್ಯ ೨೫—ತಗರ್ದು = ತಡೆದು. ಅಲಗು = ಬಾಣ
ಓಣಿ = ಕಿರುದಾರಿ; ಗಲ್ಲಿ. ಪಯ್ರು = ಹಸು. ಮಾರ್ಕೊಳೆ =
ಪ್ರತಿಭಟಿಸಲು. ಪಟ್ಟಕ್ಕೆ - ಆಗದವಂಶ = ಯದುವಂಶ. ಬಲಿ
ದೇವ = ಉತ್ಸವಗಳಲ್ಲಿ ಹೊತ್ತುಕೊಂಡು ಬಲಿ ಬರುವ ದೇವರು.
ವಾಹಿನಿ = ಸೈನ್ಯ. ಮಕ್ಕಳ್ಗಲಿ = ತನ್ನ ಮಕ್ಕಳನ್ನೆ ಕೊಲ್ಲುವಾಕೆ.
ಗಂಗೆ. ಪೊಡೆ = ಹೊಟ್ಟೆ.

ಪದ್ಯ ೨೬ — ಮದುವೆನಿಂಬ = ಮದುವೆಯಾಗುವ. ಅಟ
ಮಟ = ಮೋಸ. ಇರವು = ಆಶ್ರಯ. ಕೈಬೆಚ್ಚಿ = ಕೈಹೆಟ್ಟಿ.
ಉರಿಗೆರೆ = ಬೆಂಕಿಯ ಕೆರೆ. ಕುರು ಅರೋಚಕ = ರುಚಿಸದು. ಮು
ಬಲ = ಸಣ್ಣ ಸೈನ್ಯ.

ಮಾರೊಡ್ಡು = ವಿರೋಧಿ ಸೈನ್ಯ. ಗುರುಧ್ವಾನ = ದೊಡ್ಡ
ಶಬ್ದ. ವಿತ್ತಾಧೀಶ = ಕುಬೇರ. ಎಳ್ಪಟ್ಟು = ಓಡಿಸು. ಬೆಸ್ಕಸ =
ವಿಸ್ಮಯ. ಅಯಃಫಳಕ = ಕಬ್ಬಿಣದ ದಲಗೆ. ನಿಬದ್ಧ = ತಡೆಯ
ಲ್ಪಟ್ಟ. ಅಸ್ಪಂದ = ಅಲುಗಾಡದ. ಸಿಂಧು = ಸಮುದ್ರ.

## ಸಪ್ತಮಾಶ್ವಾಸಂ

ಪದ್ಯ ೧—ಜಿಷ್ಣು = ಅರ್ಜುನ. ಆಜಿ = ಯುದ್ಧ. ರಾಗ =
ಕೆಂಬಣ್ಣ. ಅಟಿತ್ = ಸಂಚರಿಸುವ. ಗಳ - ಭೇದ - ಪ್ರತಿಜ್ಞಾ -
ಆಸನಂ = ಕೊರಲನ್ನು ತುಂಡರಿಸುವ ಶಪಥದ ಪಾಲನೆಯನ್ನು

ಎಕ್ಕು = ಮೇಲುಸಿರು. ಬೇಗು = ಕೇರು (ಒಂದು ವಿಧವಾದ ಕೇರು ವಿಕೆ) ತಿಂಗಳ್ ಬಂಚ = ಚಂದ್ರವಂಶ. ಮುಂಕೊಂಡು = ಮುಂದೆ ಬಂದು.

ಪದ್ಯ ೧೫—ತಮ್ಮುತ್ತಿರ್ವರುಂ = ತಾವಿರ್ವರೂ. ತಾರಿತ್ತು = ತಗ್ಗಿಹೋಯಿತು. ತೂರಿತ್ತು = ಮೇಲೆ ಬಂತು. ಪೇರಿತ್ತು = ಚೆಲ್ಲಿತು.

ಪದ್ಯ ೨೧—ಅವಜ್ಞೆ = ತಿರಸ್ಕಾರ. ಜರುಚು = ಹರಟೆ. ಸಮಂತು = ಸರಿಯಾಗಿ. ತಳ್ವಿದೊಡೆ = ತಡಮಾಡಿದರೆ. ಶಿರೋಧರ = ಕಂಠ. ಗುಣ = ಹಗ್ಗ. ಪಾರುಂಬಳೆ = ಚಕ್ರ.

## ಅಷ್ಟಮಾಶ್ವಾಸಂ

ಪದ್ಯ ೧—೧೬—ಪಟುತೆ = ಸಾಮರ್ಥ್ಯ. ಮುದ್ದು = ಪ್ರೀತಿ. ಅಂಗಾರ = ಕೆಂಡ. [ಇಂಗಳ]. ಬಣವೆ = ರಾಶಿ. ಸರಿತ್ = ನದಿ. ಮತ್ತನು = [ಮತ್ + ತನು] ನನ್ನ ಶರೀರ. ಸಿಂಜಿನಿ = ಬಿಲ್ಲಿನ ಹಗ್ಗ.

ತಗುಳ್ಚಿ = ತಾಗಿಸಿ. ತಿಂತಿಣಿ = ಸಮೂಹ.

ಪದ್ಯ ೧೯—ಒಳರ್ = ಇರುವರು. ನಿಯತಿ = ಅವಸ್ಥೆ; ವಿಧಿ. ಸೆರೆವರಿಯುತೆ = ಬಂಧನವನ್ನು ಹರಿದು. ಮೆಯ್ವೆತ್ತ = ಕಾಣಿಸಿದ. ತ್ವಕ್ = ಚರ್ಮ. ಪರಿಧಾನ = ಉಡುಪು.

ಪದ್ಯ ೨೮—ಬೇಳ್ಪ = ಬೇಕಾದ. ಪುರುಳ್ = ವಸ್ತು; ಸಾರ. ಅನೂನ = ಅತಿಶಯ. ನೇಮ = ನಿಯಮ. (ಸಂ.) ಸಂದುಗಜ್ಜ = ಸಂಧಿಕಾರ್ಯ.

ಪದ್ಯ ೩೧—ವಿಳಸತ್ = ಶೋಭಿಸುವ. ಪಣತೆ = ಹಣತೆ. ಪೊರೆಯೇರ್ಗೆ = ಸಂತೋಷದಿಂದ ಉಕ್ಕೇರಲಿ. ಕರೆಗೆ = ಸುರಿಯಲಿ. ಸ್ಥಾಯಿಯಾಗಿ = ಸ್ಥಿರವಾಗಿ ನೆಲಸಿಕೊಂಡು.

